ಪ್ರಥಮ ಮುದ್ರಣ
೫೦೦೦ ಪ್ರತಿಗಳು



ಅನುವಾದಕರು

ಶ್ರೀ. ಹನುಮಂತರಾವ್ ಮಾಂಜರೇಕರ

ಪ್ರಕಾಶಕರು

ರಾ. ಶ್ರೀ. ಹುಕ್ಕೇರಿಕರ
ಅಧ್ಯಕ್ಷ, ಗಾಂಧಿಸ್ಮಾರಕ ನಿಧಿ, ಕರ್ನಾಟಕ ಶಾಖೆ.

ಮುದ್ರಕರು

ಎಂ. ಜಿ. ಪಾಲೇಕರ
ವಸಂತ ಮುದ್ರಣಾಲಯ, ಧಾರವಾಡ.

# ಮೊದಲ ಮಾತು

ಗಾಂಧೀಜಿ ಕುಳಿತಲ್ಲಿ ದೇವಮಂದಿರವಾಯಿತು; ನಡೆದಲ್ಲಿ ಪವಿತ್ರಭೂಮಿಯಾಯಿತು— ಎಂದು ಪಂಡಿತ ನೆಹರೂ ಅವರು ಹೇಳಿದರು. ಗಾಂಧೀಜಿಯವರ ಜೀವನಕಾಲದಲ್ಲಿ ಅವರ ಮಾರ್ಗದರ್ಶನದಲ್ಲಿ ಕೆಲಸವನ್ನು ಮಾಡುವ ಸೌಭಾಗ್ಯವು ಅನೇಕರಿಗೆ ಲಭಿಸಿತು. ಅವರ ವ್ಯಕ್ತಿತ್ವವು ತೋರಿದ ದಾರಿಯನ್ನು ಇಂದು ನಾವು ಅವರ ಲೇಖನಗಳ ಮೂಲಕ ಕಂಡುಕೊಳ್ಳಬೇಕಾಗಿದೆ.

ಗಾಂಧೀಜಿಯವರ ವಿಚಾರಗಳನ್ನು ಈ ರೀತಿ ಜನತೆಯ ಮುಂದಿಡುವ ದೃಷ್ಟಿಯಿಂದ ಗಾಂಧಿಸ್ಮಾರಕನಿಧಿಯವರು ಬೇರೆ ಬೇರೆ ಭಾರತೀಯ ಭಾಷೆಗಳಲ್ಲಿ ಗಾಂಧಿಸಾಹಿತ್ಯವನ್ನು ಭಾಷಾಂತರಿಸಿ ಪೂರೈಸುತ್ತಿದ್ದಾರೆ. ಕನ್ನಡದಲ್ಲಿ ಈಗಾಗಲೇ ಇಂಥ ಅನೇಕ ಪ್ರೌಢ ಪ್ರಕಟನೆಗಳಾಗಿವೆ.

ಹೆಚ್ಚು ಸರಳವಾದ ಭಾಷೆಯಲ್ಲಿ ಗಾಂಧಿಸಾಹಿತ್ಯವನ್ನು ಒದಗಿಸುವ ದೃಷ್ಟಿಯಿಂದಲೂ, ಇಂಥ ಪ್ರಕಟನೆಗಳು ಹಣ ಮತ್ತು ಆಕಾಂಗಳ ದೃಷ್ಟಿಯಿಂದ ಹೆಚ್ಚು ಸಂಗ್ರಹಾನುಕೂಲ ವಾಗಿರುವಂತೆಯೂ ಇನ್ನೂ ಎರಡು ಆಕಾರಗಳಲ್ಲಿ ಗಾಂಧಿ ಸಾಹಿತ್ಯವನ್ನು ಪ್ರಕಟಿಸುವುದೆಂದು ನಿರ್ಧರಿಸಿತು. ಈ ಗ್ರಂಥಗಳ ಉದ್ದೇಶ ಗಾಂಧಿತತ್ತ್ವಜ್ಞಾನ ಇಲ್ಲವೆ ಸಾಹಿತ್ಯದ ಮೌಲ್ಯಮಾಪನ ವಾಗಿರದೆ, ಭಿನ್ನ ಭಿನ್ನ ವಿಷಯಗಳ ಬಗೆಗೆ ಗಾಂಧೀಜಿಯವರು ಹೇಳಿದ ಮಾತುಗಳನ್ನು ತದ್ವತ್ತಾಗಿ ಭಾಷಾಂತರಿಸಿ ಕೊಡುವುದೇ ಆಗಿದೆ. ಪ್ರಸ್ತುತ ಗ್ರಂಥವು ಗಾಂಧೀಜಿಯವರ ಆತ್ಮಕಥೆಯ ಭಾಷಾಂತರವಾಗಿದೆ. ಗಾಂಧೀಜಿ ರಾಷ್ಟ್ರದ ಸೊತ್ತು. ರಾಷ್ಟ್ರೀಯ ಪರಂಪರೆಯಾದ ಅವರ ಜೀವನಪ್ರಭಾವವು ಗಾಢವಾಗಿ ಆಗಬೇಕಾದರೆ, ಎಳೆಯ ಮಕ್ಕಳು ಚಿಕ್ಕ ವಯಸ್ಸಿನಲ್ಲಿಯೇ ಗಾಂಧಿ

ಚರಿತ್ರೆಯನ್ನು ಅರಿತಿರಬೇಕು. ಎಳೆಯ ವಯಸ್ಸಿನ ಮಕ್ಕಳಿಗೆ ಹಿಡಿಯುವಂತೆ ತೀರ ಸರಳವಾದ ಮಕ್ಕಳ ಭಾಷೆಯಲ್ಲಿಯೇ ಈ ಅನುವಾದವನ್ನು ಒದಗಿಸಿ ಕೊಡಲಾಗಿದೆ.

ಈ ಪ್ರಕಟನೆಗಳಲ್ಲಿಯ ಮೊದಲಿನ ಮಾಲಿಕೆಯಲ್ಲಿ ಹೆಚ್ಚು ಸರಳವಾದ ಪ್ರತಿಪಾದನೆಯ ಕಡೆಗೆ ಲಕ್ಷ್ಯವನ್ನು ಪೂರೈಸಿದ್ದರೆ, ಜೇಬಿನಾವೃತ್ತಿಯಲ್ಲಿ ಆ ಆ ವಿಷಯಗಳ ಬಗೆಗೆ ಗಾಂಧಿ ವಿಚಾರ ಸಾರವು ನೆನಪಿನಲ್ಲಿ ಉಳಿಯುವಂತೆ ಸೂತ್ರಬದ್ಧವಾಗಿ ವಿಷಯಗಳನ್ನು ಕೊಡಲಾಗಿದೆ.

ಮೊದಲಿನ 'ಜನಪ್ರಿಯ' ಆವೃತ್ತಿಯಲ್ಲಿ ಈಗಾಗಲೇ "ಮಹಿಳೆಯರು" "ಒಳ್ಳೆಯ ಜೀವನ" "ಅಸ್ಪೃಶ್ಯತೆ" "ಸತ್ಯ" "ಸರ್ವೋದಯ" "ವಿದ್ಯಾರ್ಥಿಗಳು" ಮತ್ತು "ಖಾದಿ–ಗ್ರಾಮೋದ್ಯೋಗ" ಎಂಬ ಪುಸ್ತಕಗಳು ಪ್ರಕಟವಾಗಿವೆ.

ಶಿಕ್ಷಣ ಮತ್ತು ಇತರ ವಿಧಾಯಕ ಕಾರ್ಯಕ್ಷೇತ್ರಗಳಲ್ಲಿ ಇಂದು ಗಾಂಧಿವಿಚಾರದ ತಿಳಿವಳಿಕೆ ಮತ್ತು ಅನುಷ್ಠಾನದ ಆವಶ್ಯಕತೆ ಎಷ್ಟಿದೆಯೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಇಂಥ ವಿಚಾರಗಳಲ್ಲಿ ಆಸಕ್ತಿಯುಳ್ಳ ಶಿಕ್ಷಣ ಸಂಸ್ಥೆಗಳು, ವಯಸ್ಕರ ಶಿಕ್ಷಣ ಸಂಸ್ಥೆಗಳು, ಹಳ್ಳಿ ಮತ್ತು ಪಟ್ಟಣಗಳಲ್ಲಿಯ ವಾಚನಾಲಯಗಳು ಮತ್ತು ವಿಧಾಯಕ ಕಾರ್ಯಕರ್ತರು ಈ ಪ್ರಕಟನೆಗಳನ್ನು ಸ್ವಾಗತಿಸುವುದಾಗಿ ನಂಬಿದ್ದೇವೆ.

ವಿದ್ಯಾಗಿರಿ
ಧಾರವಾಡ
೧೫–೮–೧೯೬೦
ಸ್ವಾತಂತ್ರ್ಯ ದಿನ

**ರಾ. ಶ್ರೀ. ಹುಕ್ಕೇರಿಕರ**
ಅಧ್ಯಕ್ಷ
ಗಾಂಧಿ ಸ್ಮಾರಕ ನಿಧಿ, ಕರ್ನಾಟಕ ಶಾಖೆ

# ಪರಿವಿಡಿ


| | | |
|---|---|---|
| ೧. | ತಾಯಿ—ತಂದೆಗಳು .... .... .... | ೧ |
| ೨. | ಬಾಲ್ಯ .... .... .... .... | ೭ |
| ೩. | ಬಾಲವಿವಾಹ .... .... .... | ೧೦ |
| ೪. | 'ಪತಿದೇವ' .... .... .... | ೧೨ |
| ೫. | ಹಾಯಸ್ಕೂಲಿನಲ್ಲಿ .... .... .... | ೧೬ |
| ೬. | ದುಃಖ ಪ್ರಸಂಗ—೧ .... .... | ೨೨ |
| ೭. | ದುಃಖ ಪ್ರಸಂಗ—೨ .... .... | ೨೬ |
| ೮. | ಕಳ್ಳತನ ಮತ್ತು ಪ್ರಾಯಶ್ಚಿತ್ತ .... .... | ೨೮ |
| ೯. | ತಂದೆಯವರ ನಿಧನ ಹಾಗೂ ನನ್ನ ನಾಚಿಕೆ | ೩೨ |
| ೧೦. | ಧರ್ಮದ ಬೆಳಕು .... .... .... | ೩೪ |
| ೧೧. | ವಿಲಾಯತಿಗೆ ಹೋಗುವ ಸಿದ್ಧತೆ .... | ೪೦ |
| ೧೨. | ಜಾತಿ ಬಹಿಷ್ಕಾರ .... .... .... | ೪೪ |
| ೧೩. | ಕೊನೆಗೆ ವಿಲಾಯತಿಯಲ್ಲಿ .... .... | ೪೬ |
| ೧೪. | ನನ್ನ ಅಭಿರುಚಿ .... .... .... | ೪೭ |
| ೧೫. | 'ಸಭ್ಯಗೃಹಸ್ಥ'ನ ವೇಷದಲ್ಲಿ .... .... | ೫೦ |
| ೧೬. | ಪರಿವರ್ತನೆ .... .... .... | ೫೪ |
| ೧೭. | ಆಹಾರ ಪ್ರಯೋಗಗಳು .... .... | ೫೯ |
| ೧೮. | ಲಜ್ಜೆ— ನನ್ನ ರಕ್ಷಾಕವಚ .... .... | ೬೪. |
| ೧೯. | ಅಸತ್ಯವೆಂಬ ವಿಷ .... .... .... | ೬೮ |
| ೨೦. | ಧರ್ಮದ ಪರಿಚಯ .... .... .... | ೭೩ |
| ೨೧. | ನಿರ್ಬಲಕೇ ಬಲ ರಾಮು— .... .... | ೭೮ |




“ ಜೀವನವೆಂಬುದೊಂದು ಆಕಾಂಕ್ಷೆ. ಸಿದ್ಧಿ ಮತ್ತು ಸಾಕ್ಷಾತ್ಕಾರಗಳಿಗಾಗಿ ಹೆಣಗುವುದೇ ಅದರ ಧ್ಯೇಯವಾಗಿದೆ. ನಮ್ಮ ಲೋಪ ದೋಷಗಳ ಮೂಲಕ ನಾವು ಉಚ್ಚಧ್ಯೇಯ-ವನ್ನು ಕೆಳಗಿಳಿಸಕೂಡದು. ಅಂಥ ನನ್ನ ಲೋಪದೋಷಗಳ ಪೂರ್ಣ ಅರಿವು ನನಗೆ ಇದೆ. ಅವುಗಳನ್ನು ಹೋಗಲಾಡಿಸಲು ನಾನು ಸತ್ಯದೇವತೆಯನ್ನು ಮೂಕ ಪ್ರಾರ್ಥನೆಯಿಂದ ಆರಾಧಿಸು-ತ್ತಿರುವೆ. ”

—ಮಹಾತ್ಮಾ ಗಾಂಧಿ

# ನನ್ನ ಬಾಲ್ಯದ ನೆನಪುಗಳು

## ತಾಯಿ-ತಂದೆಗಳು

ನನ್ನ ಅಜ್ಜ ಉತ್ತಮಚಂದ ಗಾಂಧಿ ಊರ್ಫ ಓತಾಗಾಂಧಿ ಅವರು ಒಳ್ಳೇ ದೃಢಮನಸ್ಕರಾಗಿದ್ದರು. ರಾಜ್ಯ ದರಬಾರದ ಒಳಸಂಚುಗಳಿಂದಾಗಿ ಅವರು ಪೋರಬಂದರವನ್ನು ಬಿಟ್ಟು ಜುನಾಗಡ ರಾಜ್ಯದಲ್ಲಿ ಬಂದು ನೆಲಸಬೇಕಾಯಿತು. ಅಲ್ಲಿ ಅವರು ಎಡಗೈ-ಯಿಂದ ನವಾಬ ಸಾಹೇಬರಿಗೆ ಮುಜುರೆ ಮಾಡಿದರು. ಇವರಲ್ಲಿ ಕಂಡುಬರುವ ಅಗೌರವದ ಕಾರಣವನ್ನು ಯಾರೋ ಒಬ್ಬರು ಅವರಿಗೆ ಕೇಳಲಾಗಿ "ಬಲಗೈಯು ಈ ಮೊದಲೇ ಪೋರಬಂದರಕ್ಕೆ ಮೀಸಲಾಗಿದೆ" ಎಂದು ಮಾರುತ್ತರ ಸಿಕ್ಕಿತು.

ಓತಾ ಗಾಂಧಿಯ ಐದನೆಯ ಪುತ್ರರಾದ ಕರಮ-ಚಂದ ಗಾಂಧಿ ಊರ್ಫ ಕಬಾ ಗಾಂಧಿ ಅವರು ನನ್ನ ಪಿತಾಜಿಯುವರು. ಪೋರಬಂದರದ ದಿವಾಣಪದವನ್ನು ಬಿಟ್ಟಮೇಲೆ ಅವರು ರಾಜದರಬಾರದ ನ್ಯಾಯಾಲಯದಲ್ಲಿ ಸಭಾಸದರಾಗಿದ್ದರು. ಇದರ ತರುವಾಯ ಕೆಲವು ಕಾಲ ರಾಜಕೋಟದಲ್ಲಿಯೂ ಕೆಲವು ಕಾಲ ವಾಂಕಾ-ನೇರದಲ್ಲಿಯೂ ದಿವಾಣರಾಗಿದ್ದರು.

ಕಬಾ ಗಾಂಧಿಗೆ ಕೊನೆಯ ಹೆಂಡತಿಯಾದ ಪುತಲೀ ಬಾಯಿಯಿಂದ ಒಬ್ಬಳು ಮಗಳು ಮೂವರು ಗಂಡು-ಮಕ್ಕಳೂ ಹುಟ್ಟಿದರು. ಇವರಲ್ಲಿ ನಾನೇ ಎಲ್ಲರಿಗಿಂತಲೂ ಕಿರಿಯುವನು.

ನನ್ನ ತಂದೆಯುವರು ಕುಟುಂಬವತ್ಸಲರೂ ಸತ್ಯ-ಪ್ರಿಯರೂ ಶೂರರೂ, ಉದಾರರೂ, ಜೊತೆಗೆ ಸಿಡುಕಿ-ನವರೂ ಆಗಿದ್ದರು. ಕೆಲಮಟ್ಟಿಗೆ ವಿಷಯಾಸಕ್ತರೂ ಇದ್ದಿರಬೇಕು. ಅವರು ಎಂದಿಗೂ ಲಂಚವನ್ನು ತಕ್ಕೊಂಡಿಲ್ಲ. ಈ ಕಾರಣದಿಂದಾಗಿ ಅವರು ಯೋಗ್ಯ ನ್ಯಾಯದಾನದ ಬಗ್ಗೆ ಹೆಸರಾಗಿದ್ದರು. ಒಂದು ಸಲ ರಾಜಕೀಯ ಏಜಂಟನು ರಾಜಕೋಟದ ಠಾಕುರ ಸಾಹೇಬರಿಗೆ ಅಪಮಾನಕಾರಕವಾದ ಶಬ್ದಗಳನ್ನು ನುಡಿಯಲು ಅವರು ಅವನನ್ನು ಎದುರಾಡಿದರು. ಸಾಹೇಬರು ಸಿಟ್ಟಾಗಿ ಕಬಾ ಗಾಂಧಿಯವರು ಕ್ಷಮೆ-

ಬೇಡಬೇಕೆಂದು ಕೇಳಿದರು. ಕಬಾ ಗಾಂಧಿಯವರು ಕ್ಷಮೆ ಬೇಡುವದಿಲ್ಲವೆಂದು ಸ್ಪಷ್ಟವಾಗಿ ಹೇಳಿದರು. ಇದಕ್ಕಾಗಿ ಕೆಲವು ತಾಸುಗಳ ವರೆಗೆ ಅವರು ಬಂಧನ-ದಲ್ಲಿರಬೇಕಾಯಿತು. ಆದರೂ ಅವರು ಎಳ್ಳಷ್ಟೂ ಹಿಂಜರಿಯಲಿಲ್ಲ. ಕೊನೆಗೆ ಸಾಹೇಬರೇ ಅವರನ್ನು ಬಿಡುಗಡೆಮಾಡುವ ಆಜ್ಞೆಯನ್ನು ವಿಧಿಸಬೇಕಾಯಿತು. ತಂದೆಯವರಿಗೆ ಹಣಗಳಿಸುವ ಮೋಹವಿರಲಿಲ್ಲ.

ಅವರು ಕೇವಲ ಅನುಭವದಿಂದಲೇ ಶಿಕ್ಷಣವನ್ನು ಪಡೆದವರಾಗಿದ್ದರು. ಆದರೂ ಅವರ ವ್ಯವಹಾರ ಜ್ಞಾನವು ಬಹಳೇ ಉತ್ತಮವಾಗಿತ್ತು. ಆದರಿಂದ ಅತಿ ಸೂಕ್ಷ್ಮ ಸಮಸ್ಯೆಗಳನ್ನು ಬಗೆಹರಿಸುವದಾಗಲೀ ಸಾವಿ-ರಾರು ಜನರಿಂದ ಕೆಲಸ ತಕ್ಕೊಳ್ಳುವದಾಗಲೀ ಅವರಿಗೆ ಕಠಿಣವೆನಿಸುತ್ತಿದ್ದಿಲ್ಲ. ಅಷ್ಟು ಅವರ ವ್ಯವಹಾರ ಜ್ಞಾನವು ಉಚ್ಚಮಟ್ಟದ್ದಾಗಿತ್ತು. ಅವರಿಗೆ ಧಾರ್ಮಿಕ ಶಿಕ್ಷಣ-ವೇನೂ ಇರಲಿಲ್ಲವೆಂದರೂ ಅಡ್ಡಿಯಿಲ್ಲ. ಆದರೆ ಅಸಂಖ್ಯ ಹಿಂದೂ ಜನರಿಗೆ ಕಥಾಪುರಾಣಗಳನ್ನು ಕೇಳುವದರಿಂದ ಸಹಜವಾಗಿ ಉಂಟಾಗುವ ಧರ್ಮಜ್ಞಾನವು ಅವ-ರಲ್ಲಿಯೂ ಇತ್ತು. ಅವರು ತಮ್ಮ ಕೊನೆಯ ದಿನಗಳಲ್ಲಿ ಗೀತಾಪಾಠವನ್ನು ಪ್ರಾರಂಭ ಮಾಡಿದ್ದರು. ನಿತ್ಯವೂ ಪೂಜೆಯ ಹೊತ್ತಿಗೆ ಕೆಲವು ಶ್ಲೋಕಗಳನ್ನು ಉಚ್ಚಸ್ವರ-ದಲ್ಲಿ ಪಠಿಸುತ್ತಿದ್ದರು.

ನನ್ನ ತಾಯಿಯು ಸಾಧ್ವಿ ಸ್ತ್ರೀಯಾಗಿದ್ದಳು ಎಂಬ ಭಾವನೆ ನನ್ನ ಮನದಲ್ಲಿ ಮೂಡಿದೆ. ಅವಳು ಬಹಳ ಶ್ರದ್ಧೆಯುಳ್ಳವಳು. ಪೂಜಾಪಾಠಗಳನ್ನು ಮುಗಿಸದೆ ಅವಳು ಎಂದೂ ಊಟಮಾಡುತ್ತಿರಲಿಲ್ಲ. ಅವಳು ಯಾವಾಗಲೂ ಹವೇಲಿಗೆ ಅಂದರೆ ವೈಷ್ಣವ ದೇವಸ್ಥಾನಕ್ಕೆ ಹೋಗುತ್ತಿದ್ದಳು. ನನಗೆ ತಿಳಿವಳಿಕೆಯುಂಟಾದಂದಿನಿಂದ ಅವಳು ಒಮ್ಮೆಯಾದರೂ ಚಾತುರ್ಮಾಸ ವ್ರತವನ್ನು ಬಿಟ್ಟದ್ದು ನನಗೆ ನೆನಪಿಲ್ಲ. ಅವಳು ಅತಿ ಕಠಿಣವಾದ ವ್ರತವೈಕಲ್ಯಗಳನ್ನು ಕೈಕೊಂಡು ನಿರ್ವಿಘ್ನವಾಗಿ ಕೊನೆಗಾಣಿಸುತ್ತಿದ್ದಳು. ಕಾಹಿಲೆ ಬಿದ್ದರೂ ವ್ರತವನ್ನು ಬಿಡುತ್ತಿರಲಿಲ್ಲ.

ಚಾತುರ್ಮಾಸದಲ್ಲೆಲ್ಲ ಒಂದೇ ಸಲ ಉಣ್ಣುವದು ಅವಳಿಗೆ ಸಾಮಾನ್ಯವಾದ ಸಂಗತಿಯಾಗಿತ್ತು. ಒಂದು ಚಾತುರ್ಮಾಸದಲ್ಲಿಯಂತೂ ಒಂದು ದಿವಸ ಬಿಟ್ಟು ಒಂದು ದಿವಸ ಉಪವಾಸವನ್ನಾಚರಿಸುತ್ತಿದ್ದಳು. ಒಂದೇ ಸವನೆ ಎರಡು ಮೂರು ದಿನಗಳ ಉಪವಾಸವಂತೂ ಅವಳಿಗೆ ಸಹಜವಾಸ ಮಾತಾಗಿತ್ತು. ಒಂದು ಚಾತುರ್ಮಾಸದಲ್ಲಿಯಂತೂ ಸೂರ್ಯದರ್ಶನ ಮಾಡಿಯೇ ಊಟ ಮಾಡಬೇಕೆಂಬ ವ್ರತವನ್ನು ಕೈಕೊಂಡಿದ್ದಳು. ಇದಕ್ಕಾಗಿ ಸೂರ್ಯನು ಯಾವಾಗ ಕಾಣಿಸಿಕೊಳ್ಳುವನು ಮತ್ತು ತಾಯಿಯು ಯಾವಾಗ ಊಟ ಮಾಡುವಳು

ಎಂಬ ಚಿಂತೆಯಿಂದ ನಾನು ಯಾವಾಗಲೂ ಆಕಾಶ-ದತ್ತ ನೋಡುತ್ತಿರುತ್ತಿದ್ದೆನು. ನನಗೆ ಇಂಥ ದಿನಗಳ ಸ್ಮರಣೆ ಇನ್ನೂ ಇದೆ. ಸೂರ್ಯನು ಕಾಣಿಸಿಕೊಂಡ-ಕೂಡಲೇ "ಅವ್ವಾ, ಅವ್ವಾ, ಸೂರ್ಯನು ಮೂಡಿದ್ದಾನೆ." ಎಂದು ಹೇಳಲು ತಾಯಿಯು ತ್ವರೆಯಿಂದ ಬರುವಷ್ಟ-ರಲ್ಲಿಯೇ ಸೂರ್ಯನು ಮಾಯವಾಗಿಬಿಡುತ್ತಿದ್ದನು. "ಏನೂ ದೊಡ್ಡ ಮಾತಲ್ಲ. ಈ ಹೊತ್ತು ಊಟಮಾಡ-ಬೇಕೆಂದು ಈಶ್ವರೇಚ್ಛೆಯಿದ್ದ ಹಾಗೆ ಕಾಣುವದಿಲ್ಲ" ಎಂದು ಹೇಳುತ್ತ ತಾಯಿಯು ತನ್ನ ಕೆಲಸಗಳಲ್ಲಿ ಮಗ್ನ-ಳಾಗುತ್ತಿದ್ದಳು.

ನನ್ನ ತಾಯಿಯು ವ್ಯವಹಾರ ಕುಶಲೆಯೂ ಆಗಿದ್ದಳು. ರಾಜದರಬಾರದ ಎಲ್ಲ ಸಂಗತಿಗಳೂ ಅವಳಿಗೆ ಗೊತ್ತಿ-ದ್ದವು. ಅಂತಃಪುರದಲ್ಲಿ ಅವಳ ಬುದ್ಧಿಮತ್ತೆಯ ಬಗ್ಗೆ ತುಂಬಾ ಆದರವಿತ್ತು. ನಾನು ಸಣ್ಣವನಿದ್ದಾಗ ನನ್ನನ್ನು ಒಮ್ಮೊಮ್ಮೆ ರಾಜಭವನಕ್ಕೆ ತನ್ನ ಸಂಗಡ ಕರೆದುಕೊಂಡು ಹೋಗುತ್ತಿದ್ದಳು. ಠಾಕೂರ ಸಾಹೇಬರ ಮಾತೋಶ್ರೀ-ಯವರಾದ ಬಾಮಾಸಾಹೇಬರೊಂದಿಗೆ ನಡೆದ ಅವಳ ಎಷ್ಟೋ ಮಾತುಕತೆಗಳು ನನಗೆ ಇಂದಿಗೂ ನೆನಪಿವೆ.

ಈ ತಂದೆತಾಯಿಗಳಲ್ಲಿ ೧೭೨೫ ನೆಯ ಸಂವತ್ಸರದ ಆಶ್ವಿನ ಬಹುಳ ದ್ವಾದಶಿಯ ದಿನ (ಅಂದರೆ ೧೮೬೯ನೆಯ

ಇಸವಿ ಅಕ್ಟೋಬರ ೨ನೆಯ ತಾರೀಖಿನ ದಿವಸ ಪೋರಬಂದರದಲ್ಲಿ ಅಥವಾ ಸುದಾಮುಪುರಿಯಲ್ಲಿ ನಾನು ಹುಟ್ಟಿದೆನು.

ನನ್ನ ಬಾಲ್ಯವು ಪೋರಬಂದರದಲ್ಲಿಯೇ ಕಳೆಯಿತು. ನನ್ನನ್ನು ಯಾವದೋ ಶಾಲೆಗೆ ಕಲಿಯಲು ಕಳಿಸಿದ್ದರು. ನಾನು ಕಷ್ಟದಿಂದ ಕೆಲವು ಮಗ್ಗಿಗಳನ್ನು ಕಲಿತಿರಬೇಕು.

## ಬಾಲ್ಯ

ತಂದೆಯವರು ಪೋರಬಂದರದಿಂದ ರಾಜಕೋಟಕ್ಕೆ ಹೋದಾಗ ನಾನು ಏಳು ವರುಷ ವಯಸ್ಸಿನವನಿರಬೇಕು. ಆಗ ನನ್ನನ್ನು ರಾಜಕೋಟದ ಶಾಲೆಗೆ ಕಳಿಸಿದರು. ಪ್ರಾಥಮಿಕಶಾಲೆಯಿಂದ ಮೇಲಿನ ಶಾಲೆಗೆ, ಅಲ್ಲಿಂದ ಹಾಯಸ್ಕೂಲಿಗೆ ನಾನು ಹೋದೆನು. ಇಲ್ಲಿಯವರೆಗೆ ಯಾವುದೇ ಶಿಕ್ಷಕನ ಕೂಡ ನಾನು ಸುಳ್ಳಾಡಿದ್ದು ನನಗೆ ನೆನಪಿಲ್ಲ. ಯಾವ ಹುಡುಗನ ಸಂಗಡವೂ ಗೆಳೆತನ ಮಾಡಿದ್ದು ನನಗೆ ಜ್ಞಾಪಕವಿಲ್ಲ. ನಾನು ಬಹಳ ಸಂಕೋಚವೃತ್ತಿಯವನಾಗಿದ್ದೆನು.

ಹಾಯಸ್ಕೂಲಿನಲ್ಲಿಯ ಮೊದಲನೆಯ ವರುಷದಲ್ಲಿ ನಡೆದ ಒಂದು ಸಂಗತಿಯು ಉಲ್ಲೇಖನೀಯವಾಗಿದೆ. ಇನ್ಸಪೆಕ್ಟರರಾದ ಜಾಯಿಲ್ಸ ಅವರು ಪರೀಕ್ಷೆಗಾಗಿ ಶಾಲೆಗೆ ಬಂದಿದ್ದರು. ಅವರು ಹುಡುಗರಿಗೆ ಐದು ಶಬ್ದಗಳನ್ನು ಬರೆಯಲು ಹೇಳಿದರು. ಅವುಗಳಲ್ಲಿ "ಕೆಟ್ಲ್" (Kettle) ಎಂಬ ಶಬ್ದವು ಒಂದಾಗಿತ್ತು. ಅದನ್ನು ಬರೆಯುವಲ್ಲಿ ನಾನು ತಪ್ಪಿದೆನು. ಗುರುಗಳು ತಮ್ಮ ಪಾಪೋಸಿನಿಂದ

ನನಗೆ ಸಂಜ್ಞೆ ಮಾಡಿ ಸೂಚಿಸಿದರು. ನನಗೆ ಇದರ ಅರ್ಥವಾಗುವ ಬಗೆ ಹೇಗೆ? ನನ್ನ ಸಂಗಡಿಗನ ಪಾಟಿ-ಯನ್ನು ನೋಡಿ ನಾನು ನಕಲು ಮಾಡಬೇಕೆಂದು ಅವರು ಸೂಚಿಸುತ್ತಾರೆಂಬ ಸಂಗತಿಯು ನನ್ನ ತಲೆ-ಯೊಳಗೆ ಸರ್ವಥಾ ಹೋಗಲಿಲ್ಲ. ನಾವು ಬೇರೆಯವ-ರಿಂದ ನಕಲು ಮಾಡದಂತೆ ಶಿಕ್ಷಕರು ನೋಡಿಕೊಳ್ಳು-ತ್ತಾರೆಂದು ನನ್ನ ತಿಳಿವಳಿಕೆಯಿತ್ತು. ಎಲ್ಲ ಹುಡುಗರೂ ಐದೂ ಶಬ್ದಗಳನ್ನು ಸರಿಯಾಗಿ ಬರೆದರು. ನಾನೊಬ್ಬನೇ ಮೂರ್ಖನಾದೆನು. ಹಿಂದಿನಿಂದ ಗುರುಗಳು ನನಗೆ ನನ್ನ 'ಮೂರ್ಖತನ'ವನ್ನು ತೋರಿಸಿಕೊಟ್ಟರು. ಆದರೆ ಅದರ ಪರಿಣಾಮವೇನೂ ನನ್ನ ಮೇಲೆ ಆಗಲಿಲ್ಲ. ನಕಲು ಮಾಡುವುದನ್ನು ನಾನು ಎಂದೂ ಕಲಿಯಲಿಲ್ಲ.

ಇದೇ ಕಾಲದಲ್ಲಿ ನಡೆದ ಇನ್ನೆರಡು ಘಟನೆಗಳು ಯಾವಾಗಲೂ ನನ್ನ ನೆನಪಿನಲ್ಲಿವೆ. ತಂದೆಯವರು 'ಶ್ರವಣನ ಪಿತೃಭಕ್ತಿ' ಎಂಬ ನಾಟಕಗ್ರಂಥವನ್ನು ಕೊಂಡು ತಂದಿದ್ದರು. ಅದರ ಮೇಲೆ ನನ್ನ ದೃಷ್ಟಿಯು ಹರಿಯಿತು. ನಾನು ಅದನ್ನು ಬಹಳ ಆಸಕ್ತಿಯಿಂದ ಓದಿದೆನು. ಇದೇ ಸಮಯದಲ್ಲಿ ಕನ್ನಡಿಯೊಳಗೆ ಚಿತ್ರ-ಗಳನ್ನು ತೋರಿಸುವ ಜನರೂ ಬಂದಿದ್ದರು. ಶ್ರವಣನು ತನ್ನ ತಂದೆ-ತಾಯಿಗಳನ್ನು ಕಾವಡಿಯಲ್ಲಿ ಕುಳ್ಳಿರಿಸಿ ತೀರ್ಥಯಾತ್ರೆಗೆ ಕರೆದುಕೊಂಡು ಹೋಗುವ ಚಿತ್ರವನ್ನು

ನಾನು ಇವುಗಳಲ್ಲಿ ನೋಡಿದೆನು. ಇವೆರಡೂ ಸಂಗತಿ-
ಗಳು ನನ್ನ ಮನಸ್ಸಿನಲ್ಲಿ ಆಳವಾಗಿ ಮೂಡಿದ್ದವು. ನಾನೂ
ಶ್ರವಣನಂತೆಯೇ ಆಗಬೇಕೆಂದು ನನ್ನ ಮನಸ್ಸಿನಲ್ಲಿ
ವಿಚಾರ ಬಂದಿತು. ಶ್ರವಣನು ಸಾಯುತ್ತಿರುವಾಗ
ಅವನ ತಾಯಿತಂದೆಗಳು ಮಾಡಿದ ವಿಲಾಪವು ನನಗೆ
ಇಂದಿಗೂ ಜ್ಞಾಪಕವಿದೆ. ಆ ವಿಲಾಪದ ಹೃದಯದ್ರಾವಕ
ಕವನವನ್ನು ನಾನು ರಾಗದಪೆಟ್ಟಿಗೆಯ ಮೇಲೆಯೂ
ನುಡಿಸುತ್ತಿದ್ದೆನು.

ನನಗೆ ನೆನಪಿದ್ದ ಎರಡನೆಯ ಘಟನೆಯೆಂದರೆ– ನಾನು
ಹರಿಶ್ಚಂದ್ರ ನಾಟಕವನ್ನು ನೋಡಿದುದು. ಅದನ್ನು ಪುನಃ
ಪುನಃ ನೋಡಬೇಕೆಂದು ಮನಸ್ಸಿನಲ್ಲಿ ಬರುತ್ತಿತ್ತು. ಆದರೆ
ಮೇಲಿಂದಮೇಲೆ ನಾಟಕಕ್ಕೆ ಹೋಗಲು ಬಿಡುವವರಾರು?
ಆದರೂ ಈ ನಾಟಕವನ್ನು ನಾನು ನನ್ನ ಮನೋರಂಗದಲ್ಲಿ
ನೂರಾರು ಸಲ ಆಡಿರಬೇಕು. ನನಗೆ ಹರಿಶ್ಚಂದ್ರನ ಕನಸು
ಗಳು ಬೀಳುತ್ತಿದ್ದವು. ಹರಿಶ್ಚಂದ್ರನಂತೆಯೇ ಎಲ್ಲರೂ
ಸತ್ಯವಾದಿಗಳೇಕಾಗಬಾರದು ಎಂಬ ವಿಚಾರದಿಂದ
ನಾನು ಹುಚ್ಚನಂತಾದೆನು. ಹರಿಶ್ಚಂದ್ರನ ಹಾಗೆ ಕಷ್ಟ-
ಗಳನ್ನು ಅನುಭವಿಸಿಯೂ ಸತ್ಯವನ್ನು ಬಿಡದಿರುವುದು
ಜೀವನದಲ್ಲಿ ಸಾರಭೂತವಾದ ಮಾತು ಎಂಬ ವಿಚಾರವು
ನನ್ನ ಮನಸ್ಸಿನಲ್ಲಿ ದೃಢವಾಗಿ ಬೇರೂರಿತು.

## ಬಾಲವಿವಾಹ

ಹದಿಮೂರು ವರುಷದವನಿದ್ದಾಗಲೇ ನನ್ನ ಮದುವೆಯಾಯಿತೆಂದು ಇಲ್ಲಿ ಬರೆಯಲು ನನಗೆ ಅತ್ಯಂತ ದುಃಖವೆನಿಸುತ್ತದೆ. ಇಂದು ೧೨–೧೩ ವರುಷದ ಹುಡುಗರನ್ನು ನೋಡಿದಾಗ ನನ್ನ ಮದುವೆಯ ನೆನಪಾಗುತ್ತಲೇ ನನಗೆ ನನ್ನ ಬಗ್ಗೆಯೇ ಕನಿಕರ ಹುಟ್ಟುತ್ತದೆ. ಅಲ್ಲದೆ ನನ್ನಂತೆ ದುರವಸ್ಥೆಗೆ ಗುರಿಯಾಗದ ಈ ಹುಡುಗರನ್ನು ಅಭಿನಂದಿಸಬೇಕೆಂಬ ಇಚ್ಛೆಯುಂಟಾಗುತ್ತದೆ. ಬಾಲವಿವಾಹವನ್ನು ಸಮರ್ಥಿಸುವ ಒಂದೂ ನೈತಿಕ ತರ್ಕವು ನನಗೆ ಹೊಳೆಯುವದಿಲ್ಲ.

ಏಕಕಾಲಕ್ಕೆ ಲಗ್ನ ಮಾಡಬೇಕೆಂದು ನನ್ನ ಅಣ್ಣನನ್ನೂ ನನ್ನನ್ನೂ ರಾಜಕೋಟದಿಂದ ಪೋರಬಂದರಕ್ಕೆ ಕರೆದುಕೊಂಡು ಹೋದರು.

ತಂದೆಯವರು ದಿವಾಣರಾಗಿದ್ದರೂ ಏನಾಯಿತು ಕೊನೆಗೂ ಅವರು ನೌಕರರು. ರಾಜಪ್ರಿಯರಾಗಿದ್ದುದರಿಂದಂತೂ ಇನ್ನೂ ಪರಾಧೀನರು. ಠಾಕೂರ ಮಹಾ-

ಶಯರು ಕೊನೆಯಗಳಿಗೆಯವರೆಗೂ ನಮ್ಮ ತಂದೆಯವರನ್ನು ಬಿಡಲಿಲ್ಲ. ಹೋಗಗೊಟ್ಟದುದು ಸಹಿತ ಬರೀ ಎರಡು ದಿನ ಮೊದಲು. ಆದುದರಿಂದ ಅಂಚೆಯ ಗಾಡಿಯಲ್ಲಿ ಕೂಡ್ರಬೇಕಾಯಿತು. ಆದರೆ ದೈವವು ಇನ್ನೇನೋ ಚಿಂತಿಸಿತ್ತು. ರಾಜಕೋಟದಿಂದ ಪೋರಬಂದರ ಅರವತ್ತು ಹರದಾರಿ. ಎತ್ತಿನ ಬಂಡಿಯಿಂದ ಐದು ದಿನಗಳ ದಾರಿ. ತಂದೆಯವರು ಮೂರೇ ದಿನಗಳಲ್ಲಿ ಬಂದರು. ಕೊನೆಯ ಘಟ್ಟದಲ್ಲಿ ಗಾಡಿಯು ಉರುಳಿತು. ತಂದೆಯವರಿಗೆ ಬಲವಾದ ಪೆಟ್ಟಾಯಿತು. ಅವರ ಹಾಗು ನಮ್ಮ ವಿವಾಹದ ಆನಂದವು ಅರ್ಧಕ್ಕಿಳಿಯಿತು. ಆದರೆ ವಿವಾಹವೇನೊ ನಡೆದುಹೋಯಿತು.

ಅಂದಿನಿಂದ ನಾನು ಮತ್ತು ನನ್ನ ಹೆಂಡತಿ ನಾವಿಬ್ಬರೂ ಕೂಡಿಯೇ ಇರತೊಡಗಿದೆವು. ನಿಧಾನವಾಗಿ ನಮ್ಮ ಪರಿಚಯವು ಬೆಳೆಯತೊಡಗಿತು. ಪರಂಪರೆಯನ್ನು ಲಕ್ಷಿಸದೆ ಪರಸ್ಪರ ಮಾತನಾಡತೊಡಗಿದೆವು. ನಾವಿಬ್ಬರೂ ಒಂದೇ ವಯಸ್ಸಿನವರು. ಆದರೂ ನಾನು ಪತಿದೇವನಾಗಿಬಿಟ್ಟೆನು.

## ಪತಿದೇವ

ನಾನು ಏಕಪತ್ನೀ ವ್ರತವನ್ನು ಪಾಲಿಸುವುದಾದರೆ ನನ್ನ ಹೆಂಡತಿಯೂ ಏಕಪತಿವ್ರತವನ್ನು ಆಚರಿಸಬೇಕೆಂಬ ವಿಚಾರದಿಂದ ನಾನು ತುಂಬಾ ಮಾತ್ಸರ್ಯಪೂರ್ಣ ಗಂಡ ನಾಗಿಬಿಟ್ಟೆನು. ಅಲ್ಲದೆ 'ಪಾಲನೆ ಮಾಡಬೇಕು' ಎಂಬ ವಿಚಾರದಿಂದ 'ಪಾಲಿಸುವಂತೆ ಮಾಡಬೇಕು' ಎಂಬ ಹಂತಕ್ಕೆ ಬಂದು ಮುಟ್ಟಿದೆನು. ಪಾಲಿಸುವಂತೆ ಮಾಡ-ಬೇಕಾದರೆ ನಾನು ಹೆಂಡತಿಯ ಕಾವಲುಗಾರನಾಗಬೇಕು. ಹೆಂಡತಿಯು ಯಾವಾಗ ಎಲ್ಲೆಲ್ಲಿ ಹೋಗುತ್ತಾಳೆಂಬುದನ್ನು ನಾನು ತಿಳಿದುಕೊಳ್ಳುವುದು ಅನಿವಾರ್ಯವಾಯಿತು. ಇದ-ಕ್ಕಾಗಿ ನನ್ನ ಅಪ್ಪಣೆಯನ್ನು ಪಡೆದುಕೊಳ್ಳದೆ ಅವಳು ಎಲ್ಲಿಗೂ ಹೋಗಕೂಡದೆಂಬ ನನ್ನ ಭಾವನೆಯು ನಮ್ಮಿಬ್ಬ ರೊಳಗಿನ ತಾಪದಾಯಕವಾದ ಜಗಳಗಳಿಗೆ ಮೂಲ-ವಾಯಿತು. ಅಪ್ಪಣೆ ಪಡೆಯದೆ ಅವಳು ಎಲ್ಲಿಗೂ ಹೋಗ-ಕೂಡದೆನ್ನುವುದು ಒಂದು ತರದ ಬಂಧನವೇ ಆಯಿತು. ಆದರೆ ಕಸ್ತೂರಬಾಯಿಯು ಇಂತಹ ಬಂಧನವನ್ನು

ಸಹಿಸುವಷ್ಟು ಮೆತ್ತನ್ನ ಸ್ವಭಾವದವಳಿದ್ದಿಲ್ಲ. ಮನಸ್ಸಿಗೆ ಬಂದ ಕಡೆಗೆ ಅವಳು ನನ್ನನ್ನು ಕೇಳದೆಯೆ ಹೋಗೇ ಬಿಡುತ್ತಿದ್ದಳು. ಕಸ್ತೂರಬಾಯಿಯು ವಹಿಸಿದ್ದ ಈ ಸ್ವಾತಂತ್ರ್ಯವೃತ್ತಿಯು ಸಂಪೂರ್ಣ ದೋಷರಹಿತ-ವಾಗಿತ್ತೆಂದೇ ನಾನು ಒಪ್ಪುತ್ತೇನೆ ನಿಷ್ಪಾಪಳಾದ ಓರ್ವ ಬಾಲಿಕೆಯು ದೇವದರ್ಶನಕ್ಕೆ ಹೋಗುವಲ್ಲಿಯಾಗಲೀ, ಯಾರನ್ನಾದರೂ ಕಾಣಲಿಕ್ಕೆ ಹೋಗುವಲ್ಲಿಯಾಗಲೀ ಇಂತಹ ಒತ್ತಾಯವನ್ನು ಯಾಕೆ ಸಹಿಸಬೇಕು? ಇಂತಹ ದಬ್ಬಾಳಿಕೆಯನ್ನು ನಾನು ಅವಳ ಮೇಲೆ ಹೇರುವುದಾದರೆ ಅವಳೂ ನನ್ನ ಮೇಲೆ ಹಾಗೆ ಏಕೆ ಮಾಡಬಾರದು? ಆದರೆ ಇವೆಲ್ಲ ತಿಳಿವಳಿಕೆ ನನ್ನಲ್ಲಿ ಈಗ ಉಂಟಾಗಿದೆ.

ಆದರೆ ಇದರಿಂದ ನಮ್ಮ ದಾಂಪತ್ಯ ಜೀವನದಲ್ಲಿ ಮಾಧುರ್ಯವೇ ಇರಲಿಲ್ಲವೆಂದು ಓದುಗರು ತಿಳಿಯ-ಬಾರದು. ನನ್ನ ನಿಷ್ಠುರತೆಗೆ ಪ್ರೇಮವೇ ಮೂಲ-ವಾಗಿತ್ತು. ನಾನೂ ಕಲಿಯಬೇಕು, ಅವಳೂ ಕಲಿಯ ಬೇಕು; ಎರಡು ತನುಗಳಿದ್ದರೂ ಒಮ್ಮನಸ್ಸಿನವರಾಗಿರ-ಬೇಕು ಎಂಬುದೇ ನನ್ನ ಭಾವನೆಯಾಗಿತ್ತು. ಕಸ್ತೂರ-ಬಾಯಿಯ ಮನಸ್ಸಿನಲ್ಲಿಯೂ ಅದೇ ಭಾವವಿತ್ತೋ ಹೇಗೆ ಎಂಬುದನ್ನು ನಾನರಿಯೆ. ಅವಳು ನಿರಕ್ಷರಿಯಾ-ಗಿದ್ದಳು ತನ್ನ ಅಜ್ಞಾನದ ಬಗ್ಗೆ ಅವಳಲ್ಲಿ ಅಸಮಾ-ಧಾನವಿರಲಿಲ್ಲ. ಅವಳಿಗೆ ಕಲಿಸಬೇಕೆಂಬ ಹಿರಿಬಯಕೆ

ನನ್ನಲ್ಲಿತ್ತು. ಆದರೆ ನನ್ನ ವಿಷಯವಾಸನೆಯು ನನಗೆ ಕಲಿಸಲು ಹೇಗೆ ಕೊಡಬೇಕು? ಅವಳ ಮನಸ್ಸಿನ ವಿರುದ್ಧ ನಾನು ಕಲಿಸಬೇಕಾಗುತ್ತಿತ್ತು. ಅದರಲ್ಲಿಯೂ ಇಂತಹ ಸಮಯ ಸಿಗುವುದು ಬರೀ ರಾತ್ರಿಯಹೊತ್ತಿಗೆ. ಹಿರಿಯರ ಸಮಕ್ಷಮದಲ್ಲಿ ಪತ್ನಿಯ ಕಡೆಗೆ ನೋಡುವುದೂ ಶಕ್ಯವಿರಲಿಲ್ಲ. ಮಾತನಾಡುವುದಂತೂ ದೂರ ಉಳಿ-ಯಿತು. ಆ ಕಾಲದಲ್ಲಿ ಸೌರಾಷ್ಟ್ರದಲ್ಲಿ ಬುರುಕಿ ಹಾಕಿ-ಕೊಳ್ಳುವ ಅರ್ಥಹೀನವಾದ ಕಾಡುಪದ್ಧತಿಯಿದ್ದಿತು. ಅದು ಇನ್ನೂ ಇದೆ. ಹೀಗಾಗಿ ತಾರುಣ್ಯಾವಸ್ಥೆಯಲ್ಲಿ ಕಲಿಸಲು ಮಾಡಿದ ಪ್ರಯತ್ನಗಳೆಲ್ಲವೂ ವ್ಯರ್ಥವಾದವು. ನಾನು ವಿಷಯಾಸಕ್ತಿಯ ಮೋಹದಿಂದ ಎಚ್ಚತ್ತಾಗ ಸಾರ್ವಜನಿಕಜೀವನದಲ್ಲಿ ನನ್ನ ಪ್ರವೇಶವಾಗಿ ಹೋಗಿತ್ತು. ಇದರಿಂದಾಗಿ ಕಲಿಸಲು ಹೆಚ್ಚು ಸಮಯ ಕೊಡುವ ಸ್ಥಿತಿಯಲ್ಲಿ ನಾನಿರಲಿಲ್ಲ. ಆದರೆ ನನ್ನ ಪ್ರೀತಿಯು ವಿಷಯಾಸಕ್ತಿಯಿಂದ ದೂಷಿತವಾಗಿರದಿದ್ದರೆ ಕಸ್ತೂರಬಾಯಿಯು ಇಂದು ವಿದುಷಿಯಾಗಬಹುದಾ-ಗಿತ್ತು. ಶುದ್ಧ ಪ್ರೇಮದ ಮುಂದೆ ಯಾವ ಮಾತೂ ಅಶಕ್ಯವಲ್ಲ. ನಾನು ಹೆಂಡತಿಯ ವಿಷಯದಲ್ಲಿ ವಿಷ-ಯಾಸಕ್ತನಾಗಿದ್ದೆನು. ಈ ಆಸಕ್ತಿಯೊಂದಿಗೆ ನನ್ನಲ್ಲಿ ಕರ್ತವ್ಯಪರಾಯಣತೆಯು ಇಲ್ಲದೆ ಹೋಗಿದ್ದರೆ, ನಾನು ರೋಗಪೀಡಿತನಾಗಿ ಮರಣಕ್ಕೆ ತುತ್ತಾಗುತ್ತಿದ್ದೆನು; ಇಲ್ಲವೆ

ಜಗತ್ತಿನಲ್ಲಿ ನನ್ನ ಬಾಳೇ ವ್ಯರ್ಥವಾಗುತ್ತಿತ್ತು. ಈ ಕರ್ತವ್ಯಪರಾಯಣತೆಯೇ ಕೆಲಮಟ್ಟಿಗೆ ನನ್ನನ್ನು ರಕ್ಷಿ-ಸಿತು. ಇದಕ್ಕೆ ಇನ್ನೊಂದು ಕಾರಣವೂ ಇತ್ತು. ಒಳ್ಳೆಯ ನಿಷ್ಠೆಯಿದ್ದವರನ್ನು ಪರಮಾತ್ಮನೇ ರಕ್ಷಿಸುತ್ತಾನೆ. ಹಿಂದೂ ಕುಟುಂಬಗಳಲ್ಲಿ ಸಣ್ಣ ವಯಸ್ಸಿನ ಗಂಡಹೆಂಡಿರನ್ನು ಬಹಳ ಕಾಲದ ವರೆಗೆ ಕೂಡಿರಲು ತಂದೆತಾಯಿಗಳು ಬಿಡುವದಿಲ್ಲ. ಹದಿಮೂರನೆಯ ವಯಸ್ಸಿನಿಂದ ಹದಿ-ನೆಂಟನೆಯ ವಯಸ್ಸಿನ ವರೆಗಿನ ಅವಧಿಯಲ್ಲಿ ಹೀಗೆ ತುಸು ತುಸು ಸಮಯ ನಾವಿಬ್ಬರೂ ಕೂಡಿ ಒಟ್ಟಿಗಿದ್ದುದು ಮೂರು ವರ್ಷಗಳಕಿಂತ ಹೆಚ್ಚು ಆಗಲಾರದು. ೧೮ನೆಯ ವಯಸ್ಸಿನಲ್ಲಿ ನಾನು ಇಂಗ್ಲಂಡಿಗೆ ಹೋದೆನು. ಆದುದ-ರಿಂದ ದೀರ್ಘವೂ ಮಧುರವೂ ಆದ ವಿಯೋಗಕ್ಕೆ ಅನುವು ಸಿಕ್ಕಿತು. ಇಂಗ್ಲಂಡಿನಿಂದ ಹಿಂತಿರುಗಿದ ಮೇಲೂ ನಾವು ಆರು ತಿಂಗಳಕಿಂತ ಹೆಚ್ಚು ಕಾಲ ಕೂಡಿ ಇರಲಿಲ್ಲ. ಅಷ್ಟರಲ್ಲಿ ದಕ್ಷಿಣ ಆಫ್ರಿಕೆಗೆ ಹೋಗಲು ಕರೆ ಬಂದು ಬಿಟ್ಟಿತು. ಈ ಅವಧಿಯಲ್ಲಿ ನನ್ನ ಕಣ್ಣುಗಳು ಬಹಳಷ್ಟು ತೆರೆದಿದ್ದವು.

## ಹಾಯಸ್ಕೂಲಿನಲ್ಲಿ

ವಿವಾಹದ ಪರಿಣಾಮವಾಗಿ ನನ್ನ ಒಂದು ವರುಷವು ವ್ಯರ್ಥ ಹೋಯಿತು. ಆದರೆ ನನ್ನ ಅಭ್ಯಾಸವು ಹಾಗೆಯೇ ಮುಂದುವರಿಯಿತು. ಐದನೆಯ ಹಾಗೂ ಆರನೆಯ ಇಯತ್ತೆಗಳಲ್ಲಿ ಅನುಕ್ರಮವಾಗಿ ೪ ಹಾಗು ೧೦ ರೂಪಾಯಿಗಳ ಮಾಸಿಕ ಶಿಷ್ಯವೃತ್ತಿಗಳು ನನಗೆ ಸಿಕ್ಕಿ-ದುವು. ಈ ವಿದ್ಯಾರ್ಥಿ ವೇತನಗಳು ಸೌರಾಷ್ಟ್ರದ ವಿದ್ಯಾರ್ಥಿಗಳಲ್ಲಿ ಮೇಲಿನ ಕ್ರಮಾಂಕ ಪಡೆದವರಿಗಾ-ಗಿಯೇ ಇದ್ದವು. ಆ ಕಾಲದಲ್ಲಿ ೫೦ ವಿದ್ಯಾರ್ಥಿಗಳ ವರ್ಗದಲ್ಲಿ ಸೌರಾಷ್ಟ್ರದವರು ಹೆಚ್ಚು ಮಂದಿ ಇರುವುದು ಸಾಧ್ಯವಿರಲಿಲ್ಲ.

ನಾನು ನನ್ನ ಆಚಾರ ವಿಚಾರಗಳಲ್ಲಿ ಬಹಳ ಜಾಗ-ರೂಕನಾಗಿರುತ್ತಿದ್ದೆನು. ಒಳ್ಳೆಯ ನಡತೆಯಲ್ಲಿ ನನ್ನಿಂದೇ-ನಾದರೂ ತಪ್ಪಾದರೆ ನಾನು ಅಳುತ್ತಿದ್ದೆನು. ನಾನು ಮಾಡಿದ ಯಾವುದೇ ಕೆಲಸಕ್ಕಾಗಿ ಶಿಕ್ಷಕರು ನನ್ನನ್ನು ದೂರುವಂತಾದರೆ ಅಥವಾ ಅವರ ಮನಸ್ಸಿನಲ್ಲಿ ಅಂತಹ

ವಿಚಾರವು ಸಹ ಹುಟ್ಟುವಂತಾದರೆ, ಅದನ್ನು ಸಹಿಸು-ವುದು ನನ್ನಿಂದಾಗುತ್ತಿರಲಿಲ್ಲ.

ನಾನು ಏಳನೆಯ ಇಯತ್ತೆಯಲ್ಲಿದ್ದಾಗ ದೋರಾಬಜಿ ಏದಲಜಿ ಗಿಮಿ ಅವರು ಮುಖ್ಯಾಧ್ಯಾಪಕರಾಗಿದ್ದರು. ಅವರು ಮೇಲಿನ ತರಗತಿಯ ವಿದ್ಯಾರ್ಥಿಗಳಿಗೆ ವ್ಯಾಯಾಮವನ್ನೂ ಕ್ರಿಕೆಟ್ ಆಡುವದನ್ನೂ ಕಡ್ಡಾಯ-ವಾಗಿ ಮಾಡಿದ್ದರು. ಆದರೆ ನನಗೆ ಅವುಗಳಲ್ಲಿ ಅಭಿ-ರುಚಿಯಿರಲಿಲ್ಲ. ಕಡ್ಡಾಯವನ್ನಾಗಿಸುವ ಮೊದಲು ನಾನು ವ್ಯಾಯಾಮಕ್ಕೆ ಎಂದೂ ಹೋಗುತ್ತಿರಲಿಲ್ಲ.

ಆದರೂ ವ್ಯಾಯಾಮಕ್ಕೆ ಹೋಗದಿದ್ದುದರಿಂದ ನನಗೆ ಯಾವ ಹಾನಿಯೂ ಆಗಲಿಲ್ಲ. ಇದಕ್ಕೂ ಕಾರಣ ವಿದೆ. ಶುದ್ಧ ಹವೆಯಲ್ಲಿ ತಿರುಗಾಡುವುದು ಒಳ್ಳೆಯ-ದೆಂದು ನಾನು ಪುಸ್ತಕಗಳಲ್ಲಿ ಓದಿದ್ದೆನು. ಈ ಮಾತು ನನ್ನ ಮನಸ್ಸಿಗೆ ಹಿಡಿಯಿತು. ಅಂದಿನಿಂದ ತಿರುಗಾಡುವ ಅಭ್ಯಾಸವನ್ನಿಟ್ಟೆನು. ತಿರುಗಾಡುವುದೂ ಒಂದು ತರದ ವ್ಯಾಯಾಮವೇ ಆಗಿದೆ. ಇದರಿಂದಾಗಿ ನನ್ನ ಮೈಯು ಗಟ್ಟಿಮುಟ್ಟಾಯಿತು.

ತಂದೆಯವರ ಶುಶ್ರೂಷೆ ಮಾಡುವ ತೀವ್ರ ಇಚ್ಛೆಯೂ ವ್ಯಾಯಾಮದ ಅರುಚಿಗೆ ಇನ್ನೊಂದು ಕಾರಣವಾಗಿತ್ತು. ಶಾಲೆ ಬಿಡುತ್ತಲೇ ಮನೆಗೆ ಹೋಗಿ ಅವರ ಸೇವೆಯಲ್ಲಿ ಮಗ್ನನಾಗುತ್ತಿದ್ದೆನು. ಆದರೆ ವ್ಯಾಯಾಮವನ್ನು ಕಡ್ಡಾಯ

ಪ್ರಾರಂಭಿಸಿದಾಗ ಈ ಸೇವೆಯಲ್ಲಿ ವಿಘ್ನವುಂಟಾಯಿತು. ತಂದೆಯವರ ಸೇವೆಗೈಯುವುದಕ್ಕಾಗಿ ನನಗೆ ವ್ಯಾಯಾಮದಿಂದ ಬಿಡುವು ಕೊಡಬೇಕೆಂದು ನಾನು ಗಿಮಿ ಸಾಹೇಬರನ್ನು ಬಿನ್ನವಿಸಿದೆನು. ಆದರೆ ಅವರು ಬಿಡುವು ಕೊಡುವುದು ಹೇಗೆ ?

ಶನಿವಾರ ದಿನ ಒಮ್ಮೆ ಬಳಿಗ್ಗೆ ಶಾಲೆ ಇತ್ತು. ಸಂಜೆಯ ನಾಲ್ಕು ಗಂಟೆಗೆ ವ್ಯಾಯಾಮಕ್ಕಾಗಿ ಹೋಗಬೇಕಾಗಿತ್ತು. ನನ್ನ ಹತ್ತಿರ ಗಡಿಯಾರವಿರಲಿಲ್ಲ. ಮುಗಿಲಿನಲ್ಲಿ ಮೋಡಗಳಿದ್ದವು. ಇದರಿಂದ ನಾನು ಮೋಸಹೋದೆನು. ವ್ಯಾಯಾಮಕ್ಕೆ ಹೋಗಿ ಮುಟ್ಟುವಷ್ಟರಲ್ಲಿ, ಎಲ್ಲ ಹುಡುಗರೂ ಹೊರಟು ಹೋಗಿದ್ದರು. ಮರುದಿನ ಗಿಮಿ ಸಾಹೇಬರು ನನ್ನ ಗೈರುಹಾಜರಿಯ ಕಾರಣವನ್ನು ಕೇಳಿದರು. ಆದ ನಿಜ ಸಂಗತಿಯನ್ನು ನಾನು ತಿಳಿಸಿದೆನು. ನನ್ನ ಹೇಳಿಕೆ ಅವರಿಗೆ ನಿಜವೆನಿಸಲಿಲ್ಲ. ನನಗೆ ಒಂದು ಆಣೆ ದಂಡ ವಿಧಿಸಿದರು. ಗುರುಗಳು ನಾನು ಹೇಳಿದ್ದು ಸುಳ್ಳೆಂದು ತಿಳಿದರಲ್ಲಾ— ಎಂದು ನನಗೆ ಬಹಳ ದುಃಖವಾಯಿತು. ನಾನು ಸುಳ್ಳು ಹೇಳಲಿಲ್ಲವೆಂಬುದನ್ನು ಮನಗಾಣಿಸುವುದು ಹೇಗೆ ? ಯಾವ ಉಪಾಯವೂ ತೋರಲಿಲ್ಲ. ಮನಸ್ಸಿನಲ್ಲಿ ವ್ಯಥೆಪಡುತ್ತ ಹಾಗೆಯೇ ಉಳಿಯಬೇಕಾಯಿತು. ನಾನು ಅತ್ತೆನು. ಸತ್ಯವನ್ನು ನುಡಿಯುವವನೂ ಆಚರಿಸುವವನೂ

ಎಚ್ಚರಗೊಳಿಸಿದಾಗಿರಬಹುದೆನ್ನುವುದು ಅಂದು ನನಗೆ ತಿಳಿದಿತ್ತು. ನನ್ನ ಶಿಕ್ಷಣದ ಅವಧಿಯಲ್ಲಿ ನನ್ನಿಂದಾದ ಅಜಾಗರೂಕತೆಯು ಇದೇ ಮೊದಲಿನದು, ಇದೇ ಕೊನೆಯದು. ಕೊನೆಗೆ ಹೇಗಾದರೂ ದೊರೆತ ನನಗಾದ ದಂಡವನ್ನು ಕ್ಷಮಿಸಿಕೊಂಡೆನೆಂಬ ಬಗ್ಗೆ ಅಸ್ಪಷ್ಟವಾದ ನೆನಪು ನನಗೆ ಇದೆ.

ವ್ಯಾಯಾಮದಿಂದ ಬಿಡುವು ಸಿಕ್ಕಿತು. ತಂದೆಯವರು ಗಿಮಿ ಸಾಹೇಬರಿಗೆ ಬರೆದ ಪತ್ರವೇ ಇದಕ್ಕೆ ಕಾರಣ.

ಒಂದು ತಪ್ಪಿನ ದುಷ್ಪರಿಣಾಮವನ್ನು ನಾನು ಇಂದಿಗೂ ಅನುಭವಿಸುತ್ತಿದ್ದೇನೆ. ಶಿಕ್ಷಣದಲ್ಲಿ ಸುಂದರ ಅಕ್ಷರಗಳು ಅವಶ್ಯವಿಲ್ಲವೆಂಬ ತಪ್ಪು ಕಲ್ಪನೆಯು ನನ್ನಲ್ಲಿ ವಿಲಾಯತಿಗೆ ಹೋಗುವ ವರೆಗೂ ಇತ್ತು. ಆದರೆ ಬೇರೆಯವರ ಮುತ್ತಿನಂತಹ ಅಕ್ಷರಗಳನ್ನು ನೋಡಿ ನನಗೆ ಪಶ್ಚಾತ್ತಾಪವಾಯಿತು. ಕೆಟ್ಟ ಅಕ್ಷರಗಳನ್ನು ಬರೆಯುವುದು ಅಪೂರ್ಣ ಶಿಕ್ಷಣದ ಗುರುತೆಂದು ತಿಳಿಯಬೇಕೆಂಬುದು ನನ್ನ ಲಕ್ಷ್ಯಕ್ಕೆ ಬಂದಿತು. ಹಿಂದಿನಿಂದ ನನ್ನ ಬರೆಹವನ್ನು ಸುಧಾರಿಸಲಿಕ್ಕೆ ಪ್ರಯತ್ನಿಸಿದೆನು. ಆದರೆ ಗಡಿಗೆಯು ಸುಟ್ಟಮೇಲೆ ಮಣ್ಣು ಹಚ್ಚಿದರೆ ಲಾಭವೇನು ?

ಸುಂದರ ಅಕ್ಷರವು ಶಿಕ್ಷಣದ ಆವಶ್ಯಕವಾದ ಅಂಗವು. ಇದಕ್ಕಾಗಿ ಚಿತ್ರಕಲೆಯನ್ನು ಕಲಿಯಬೇಕು. ಮಕ್ಕಳ

ಚಿತ್ರಕಲೆಯನ್ನು ಮೊದಲು ಕಲಿಸಬೇಕು. ಹಕ್ಕಿ ಮೊದ-ಲಾದವುಗಳನ್ನು ನೋಡಿ ಮಕ್ಕಳು ಹೇಗೆ ಅವುಗಳನ್ನು ನೆನಪಿಟ್ಟುಕೊಳ್ಳುವರೋ, ಮತ್ತು ಅವುಗಳನ್ನು ಸುಲಭ-ವಾಗಿ ಗುರುತಿಸುವರೋ, ಅದೇ ರೀತಿಯಲ್ಲಿ ಅಕ್ಷರ-ಗಳನ್ನು ಗುರುತ್ತಿಸಲು ಕಲಿಯಬೇಕು. ಚಿತ್ರಕಲೆಯನ್ನು ಕಲಿತು ಚಿತ್ರಗಳನ್ನು ಬರೆಯಲು ಕಲಿತಾದಮೇಲೆ ಅಕ್ಷರಗಳನ್ನು ಬರೆಯಲು ಕಲಿತರೆ, ಅವರ ಅಕ್ಷರವು ಮುದ್ರಿತ ಅಕ್ಷರದಂತೆ ಸುಂದರವಾಗುವುದು.

ಈ ಕಾಲದ ವಿದ್ಯಾಜೀವನವ ಇನ್ನೊಂದು ಸಂಗ-ತಿಯು ಉಲ್ಲೇಖನೀಯುವಾಗಿದೆ. ಸಂಸ್ಕೃತದ ಶಿಕ್ಷಕರು ನಮ್ಮಿಂದ ನಿಷ್ಠುರವಾಗಿ ಕೆಲಸ ತೆಗೆದುಕೊಳ್ಳುತ್ತಿದ್ದರು. ಫಾರಸಿ ಭಾಷೆಯ ಶಿಕ್ಷಕರು ಮೃದು ಸ್ವಭಾವದವರಾಗಿ-ದ್ದರು. ಫಾರಸಿ ಭಾಷೆಯು ಸುಲಭವಾಗಿದೆಯೆಂದು ವಿದ್ಯಾರ್ಥಿಗಳು ತಮ್ಮಲ್ಲಿ ಆಡಿಕೊಳ್ಳುತ್ತಿದ್ದರು. ಇದನ್ನು ಕೇಳಿ ನಾನೂ ಲುಬ್ಧನಾದೆನು. ನಾನು ಒಂದು ದಿನ ಫಾರಸಿ ಭಾಷೆಯ ವರ್ಗದಲ್ಲಿ ಹೋಗಿ ಕುಳಿತುಕೊಂಡೆನು. ಸಂಸ್ಕೃತ ಶಿಕ್ಷಕರು ನನ್ನನ್ನು ಕರೆದು ಕೇಳಿದರು: "ನೀನು ಯಾರ ಮಗನಿರುವಿ ಎಂಬುದನ್ನು ವಿಚಾರಿಸು. ನಿನ್ನ ಸ್ವಂತ ಧರ್ಮದ ಭಾಷೆಯನ್ನು ನಿನಗೆ ಕಲಿಯುವುದು ಬೇಡವೆ? ನಿನಗೆ ತಿಳಿಯದುದನ್ನು ನನಗೆ ಕೇಳು. ಎಲ್ಲ ವಿದ್ಯಾರ್ಥಿಗಳಿಗೂ ಚೆನ್ನಾಗಿ ಸಂಸ್ಕೃತವನ್ನು ಕಲಿಸ-

ಬೇಕೆಂದು ನನ್ನ ಇಚ್ಛೆ ಇದೆ. ಮುಂದೆ ಓದಿದಂತೆಲ್ಲ ನಿನಗೆ ಅದರಲ್ಲಿ ಅಭಿರುಚಿಯು ಹುಟ್ಟುವದು. ನೋಡು, ಎದೆಗುಂದಬೇಡ. ನೀನು ಪುನಃ ನನ್ನ ವರ್ಗದಲ್ಲಿ ಬಂದು ಕುಳಿತುಕೊಳ್ಳು.” ಶಿಕ್ಷಕರ ಪ್ರೇಮವನ್ನು ಕಡೆಗಣಿಸುವುದು ನನ್ನಿಂದಾಗಲಿಲ್ಲ. ಇಂದು ನಾನು ಕೃಷ್ಣ ಶಂಕರ ಪಾಂಡ್ಯರಿಗೆ ಕೃತಜ್ಞನಾಗಿದ್ದೇನೆ. ಯಾವುದೇ ಹಿಂದೂ ಬಾಲಕನು ಸಂಸ್ಕೃತವನ್ನು ಚೆನ್ನಾಗಿ ಕಲಿಯದೆ ಇರಕೂಡದೆಂದು ನನಗೆ ಹಿಂದಿನಿಂದ ಹೊಳೆಯಿತು.

ಉಚ್ಚ ಶಿಕ್ಷಣದಲ್ಲಿ ಮಾತೃಭಾಷೆಯ ನಂತರ ಹಿಂದಿ, ಸಂಸ್ಕೃತ, ಫಾರಸಿ, ಅರಬಿ ಹಾಗೂ ಇಂಗ್ಲಿಷ ಭಾಷೆಗಳಿಗೂ ಸ್ಥಾನವಿರಬೇಕು. ಇಷ್ಟೊಂದು ಭಾಷೆಗಳ ಸಂಖ್ಯೆಯಿಂದ ಯಾರೂ ಭಯಪಡುವುದು ಬೇಡ. ಹಿಂದಿ, ಸಂಸ್ಕೃತ, ಗುಜರಾತಿ ಇವು ಒಂದೇ ಭಾಷೆಯೆಂದು ತಿಳಿಯಬಹುದು. ಅದೇ ರೀತಿಯಲ್ಲಿ ಫಾರಸಿ, ಅರಬಿ ಭಾಷೆಗಳು ಒಂದೇ.

---

## ದುಃಖದ ಪ್ರಸಂಗ— ೧

ನನ್ನ ಕಿರಿಯ ಅಣ್ಣನ ಮಿತ್ರನೊಂದಿಗೆ ನಾನು ಗೆಳೆತನ ಮಾಡಿದೆನು. ಅವನ ಸಹವಾಸವು ನನ್ನ ತಾಯಿ, ಹಿರಿಯ ಅಣ್ಣ ಹಾಗೂ ನನ್ನ ಹೆಂಡತಿ— ಈ ಮೂವರಿಗೂ ಸಮ್ಮತವಿರಲಿಲ್ಲ. ಆದರೆ ನಾನು "ಅವನನ್ನು ಸುಧಾರಿಸಲಿಕ್ಕೆಂದು ಅವನೊಂದಿಗೆ ಸಂಬಂಧವನ್ನು ಬೆಳೆಸಿದ್ದೇನೆ. ನನ್ನನ್ನು ಕುರಿತು ತಾವು ಎಳ್ಳಷ್ಟೂ ಚಿಂತಿಸುವುದು ಬೇಡ" ಎಂದು ಹೇಳಿದೆನು.

ನನ್ನ ವಿಚಾರವು ಸರಿಯಾಗಿರಲಿಲ್ಲವೆಂಬುದು ನನಗೆ ಹಿಂದಿನಿಂದ ತಿಳಿದು ಬಂದಿತು. ಒಬ್ಬಾತನನ್ನು ಸುಧಾರಿಸುವುದಕ್ಕಾಗಿಯೇ ಯಾಕಾಗಲೊಲ್ಲದು, ನಾವು ಆಳ ನೀರಿನಲ್ಲಿ ಇಳಿಯುವುದು ತರವಲ್ಲ. ಯಾರನ್ನು ನಾವು ಸುಧಾರಿಸಲು ಬಯಸುತ್ತೇವೆಯೋ ಅವರೊಂದಿಗೆ ಗೆಳೆತನವಾಗುವುದು ಸಾಧ್ಯವೇ ಇಲ್ಲ. ಗೆಳೆತನದಲ್ಲಿ ಅದ್ವೈತ ಭಾವವಿರಬೇಕು. ಇಂತಹ ಗೆಳೆತನವು ಜಗತ್ತಿನಲ್ಲಿ ಕಾಣುವುದು ಅಪರೂಪ. ಸಮಾನಗುಣ ಉಳ್ಳವರಲ್ಲಿಯೇ ಗೆಳೆತನವು ಶೋಭಿಸುತ್ತದೆ. ಹಾಗೂ ಮಿತ್ರರಲ್ಲಿ ಒಬ್ಬರ

ಪ್ರಭಾವವು ಇನ್ನೊಬ್ಬರ ಮೇಲೆ ಬೀಳದೆ ಇರುವುದಿಲ್ಲ. ಆದುದರಿಂದ ಗೆಳೆತನದಲ್ಲಿ ಸುಧಾರಣೆಗೆ ಬಹು ಸ್ವಲ್ಪ ಇಂಬು ಇದೆ. ಗಾಢವಾದ ಮಿತ್ರತ್ವವು ಅನಿಷ್ಟವಾಗಿರುವುದು. ಯಾಕೆಂದರೆ ಮನುಷ್ಯನು ದೋಷಗಳನ್ನು ಕೂಡಲೆ ಗ್ರಹಿಸುತ್ತಾನೆ; ಆದರೆ ಗುಣಗಳನ್ನು ಗ್ರಹಿಸಲಿಕ್ಕೆ ಪ್ರಯಾಸಪಡಬೇಕಾಗುತ್ತದೆ. ಪರಮಾತ್ಮನೊಂದಿಗೆ ಮಿತ್ರತ್ವವನ್ನು ಬಯಸುವವನು ಒಬ್ಬನೇ ಒಂಟಿಗನಾಗಿರಬೇಕು ಅಥವಾ ಇಡೀ ವಿಶ್ವದೊಂದಿಗೆ ಮಿತ್ರತ್ವವನ್ನು ಮಾಡಬೇಕು.

ನನ್ನ ಮಿತ್ರನು ನನಗೆ ಹೇಳಿದನು: "ನಾವು ಭಾರತೀಯರು ಮಾಂಸವನ್ನು ತಿನ್ನುವದಿಲ್ಲ; ಇದರಿಂದಾಗಿ ನಿಶ್ಶಕ್ತರಾಗಿದ್ದೇವೆ. ಇಂಗ್ಲಿಷರು ನಮ್ಮ ಮೇಲೆ ರಾಜ್ಯವಾಳುತ್ತಿರುವುದಕ್ಕೆ ಅವರ ಮಾಂಸಾಹಾರವೇ ಕಾರಣ. ನೋಡು, ನಮ್ಮ ಶಿಕ್ಷಕರು ಮಾಂಸಾಹಾರಿಗಳಾಗಿದ್ದಾರೆ. ಹೀಗೆ ದೊಡ್ಡ ದೊಡ್ಡ ಜನರು ಮಾಂಸವನ್ನು ತಿನ್ನುತ್ತಾರೆ: ನೀನೂ ಅದನ್ನು ತಿನ್ನಬೇಕು."

ಮಾಂಸ ತಿನ್ನುವುದು ಒಳ್ಳೆಯದೆಂದು ನಾನು ತಿಳಿಯತೊಡಗಿದೆ. ಆದರಿಂದ ನಾನು ಬಲವಂತನೂ ಧೈರ್ಯಶಾಲಿಯೂ ಆಗುವೆನು; ಇಡೀ ದೇಶವೇ ಮಾಂಸಾಹಾರಿಯಾದರೆ ನಾವು ಇಂಗ್ಲಿಷರನ್ನು ಗೆಲ್ಲಬಲ್ಲೆವು ಎಂದೂ ನಾನು ಭಾವಿಸಿದನು.

ನಾವು ಮಾಂಸವನ್ನು ತಿನ್ನುವ ದಿನವನ್ನು ನಿಶ್ಚಯಿಸಿದೆವು. ನಾನು ತಂದೆತಾಯಿಗಳಲ್ಲಿ ಭಕ್ತಿಯುಳ್ಳವನಾಗಿದ್ದೆನು. ನನ್ನ ಮಾಂಸಾಹಾರದ ಸುದ್ದಿಯು ಅವರಿಗೆ ಗೊತ್ತಾದರೆ, ಅವರು ವ್ಯಥೆಪಟ್ಟು ಸಾಯುವರು. ತಿಳಿದೋ ತಿಳಿಯದೆಯೋ ನಾನು ಸತ್ಯಸೇವಕನಾಗಿದ್ದೆನು. ಮಾಂಸವನ್ನು ಸೇವಿಸಿದರೆ ತಂದೆತಾಯಿಗಳನ್ನು ವಂಚಿಸಲೇಬೇಕಾಗುವುದೆಂಬುದು ನನಗೆ ತಿಳಿಯುತ್ತಿದ್ದಿಲ್ಲವೆಂದು ಹೇಳಲಾರೆನು.

ನಾನು ಬಲಿಷ್ಠನಾಗಬೇಕು. ಇತರರೂ ಹೀಗಾಗುವಂತೆ ಪ್ರೇರಿಸಬೇಕು. ಮತ್ತು ಬ್ರಿಟಿಶರನ್ನು ಓಡಿಸಿ, ಭಾರತವನ್ನು ಸ್ವತಂತ್ರವನ್ನಾಗಿಸಬೇಕು ಎಂದು ನಾನು ಬಯಸುತ್ತಿದ್ದೆನು. ಈ ಸುಧಾರಣೆಯ ಉತ್ಸಾಹದಲ್ಲಿ ನಾನು ಅಂಧನಾದೆನು.

ಹೀಗೆಯೇ ಒಂದು ವರ್ಷ ಗತಿಸಿರಬೇಕು; ಅಷ್ಟರಲ್ಲಿ, ಐದಾರು ಸಲ ನಾನು ಮಾಂಸವನ್ನು ತಿಂದಿರಬೇಕು. ಇಂತಹ ಭೋಜನಗಳಲ್ಲಿ ನಾನು ಭಾಗವಹಿಸಿದಾಗ, ಮನೆಗೆ ಬಂದು ಊಟ ಮಾಡುವುದಾಗುತ್ತಿರಲಿಲ್ಲ. ತಾಯಿಯು ಊಟಕ್ಕೆ ಕರೆದಾಗ "ಇಂದು ಹಸಿವೆಯಿಲ್ಲ; ತಿಂದದ್ದು ಪಚನವಾಗಲಿಲ್ಲ" ಎಂದು ನೆವ ಹೇಳಬೇಕಾಗುತ್ತಿತ್ತು. ಹೀಗೆ ನೆವ ಹೇಳುವ ಪ್ರಸಂಗ ಬಂದಾಗಲೆಲ್ಲ, ನನ್ನ ಮನಸ್ಸಿಗೆ ತೀವ್ರವಾದ ಆಘಾತವಾಗುತ್ತಿತ್ತು.

ನಾನು ಸುಳ್ಳು ಹೇಳುತ್ತಿದ್ದೇನೆ— ಅದೂ ನನ್ನ ತಾಯಿಯ ಕೂಡ— ಎಂದು ನನಗೆ ತಿಳಿಯುತ್ತಿತ್ತು. ಹುಡುಗರು ಮಾಂಸಾಹಾರ ಮಾಡುತ್ತಿದ್ದಾರೆಂದು ತಂದೆ-ತಾಯಿಗಳಿಗೆ ತಿಳಿದದ್ದೇ ಆದರೆ, ಅವರ ಮೇಲೆ ವಿದ್ಯುತ್ಪ್ರಹಾರ-ವಾಗುವುದೆಂಬ ವಿಚಾರಗಳು ನನ್ನ ಹೃದಯವನ್ನು ಚುಚ್ಚುತ್ತಿದ್ದವು.

ಆದುದರಿಂದ "ಮಾಂಸಾಹಾರ ಮಾಡುವುದು ಅವಶ್ಯವಿದ್ದರೂ ತಂದೆ-ತಾಯಿಗಳನ್ನು ವಂಚಿಸುವುದು ಮಾಂಸ ತಿನ್ನುವುದಕ್ಕಿಂತಲೂ ಹೆಚ್ಚು ಕೆಡುಕಾದುದು. ಆದುದರಿಂದ ತಂದೆ-ತಾಯಿಗಳು ಬದುಕಿರುವ ವರೆಗೆ ಮಾಂಸ ತಿನ್ನಬಾರದು" ಎಂದು ನಾನು ನಿಶ್ಚಯಿಸಿದೆನು. ಈ ನಿಶ್ಚಯವನ್ನು ನಾನು ನನ್ನ ಮಿತ್ರನಿಗೂ ತಿಳಿಸಿದೆನು. ಆ ದಿನದಿಂದ ಬಿಟ್ಟ ಮಾಂಸಾಹಾರವು ಬಿಟ್ಟೇ-ಹೋಯಿತು.

## ದುಃಖದ ಪ್ರಸಂಗ— ೨

ಈ ಮಿತ್ರನ ಗೆಳೆತನವು ನನ್ನನ್ನು ವ್ಯಭಿಚಾರಕ್ಕೂ ಎಳೆದುಬಿಡುತ್ತಿದ್ದಿತು. ಒಮ್ಮೆ ಈ ಮಿತ್ರನು ನನ್ನನ್ನು ವೇಶ್ಯಾಭವನಕ್ಕೆ ಕರೆದುಕೊಂಡು ಹೋದನು. ಅವಶ್ಯ-ವುಳ್ಳ ಸೂಚನೆಗಳನ್ನು ಕೊಟ್ಟು ಅವನು ಓರ್ವ ವೇಶ್ಯೆಯ ಮನೆಗೆ ನನ್ನನ್ನು ಕಳಿಸಿದನು. ನಾನು ಮನೆಯನ್ನೇನೋ ಪ್ರವೇಶಿಸಿಯಾಯಿತು. ಆದರೆ ಯಾರನ್ನು ದೇವರು ರಕ್ಷಿಸಲು ಇಚ್ಛಿಸುತ್ತಾನೆಯೋ ಅವನು ಸ್ವತಃ ಪತನವನ್ನು ಬಯಸಿದರೂ ದೇವರು ಅವನನ್ನು ರಕ್ಷಿಸುತ್ತಾನೆ. ಆ ಪಾಪಕೂಪದಲ್ಲಿ ನನಗೆ ಜಗತ್ತೆಲ್ಲವೂ ಕತ್ತಲು ಕವಿದಂತೆ ತೋರತೊಡಗಿತು. ಒಂದು ಮಾತನ್ನೂ ಆಡಲು ಸಾಧ್ಯವಾಗಲಿಲ್ಲ. ಲಜ್ಜೆಯಿಂದ ಸ್ತಬ್ಧನಾಗಿ ಆಕೆಯ ಹತ್ತಿರ ಮಂಚದ ಮೇಲೆ ಕುಳಿತು ಬಿಟ್ಟೆನು. ಆಕೆಗೆ ಬಹಳ ಸಿಟ್ಟು ಬಂದು ನನ್ನನ್ನು ಬಯ್ದು ಬಾಗಿಲನ್ನು ತೋರಿಸಿಬಿಟ್ಟಳು.

ನನ್ನ ಗಂಡಸುತನಕ್ಕೆ ಕೊರತೆ ಬಂದಂತೆ ನನಗೆ ತೋರಿ ಭೂಮಿಯು ಬಾಯಿ ತೆರೆದರೆ ಮಾಯವಾದೇನು

ಎನಿಸಿತು. ಆದರೆ ಈ ರೀತಿಯಾಗಿ ಉದ್ಧಾರ ಮಾಡಿ ದುದಕ್ಕಾಗಿ ನಾನು ಸದಾ ದೇವರ ಉಪಕಾರವನ್ನು ಸ್ಮರಿಸುತ್ತಿದ್ದೇನೆ.

ಈ ಸ್ನೇಹಿತನ ಮಾತುಗಳನ್ನು ಕೇಳಿ, ನಾನು ನನ್ನ ಹೆಂಡತಿಗೆ ಬಹಳ ಸಂಕಟವನ್ನುಂಟುಮಾಡಿದ್ದೇನೆ. ಹೀಗೆ ಹಿಂಸೆ ಮಾಡುತ್ತಿದ್ದುದಕ್ಕೆ ನಾನು ನನ್ನನ್ನು ಎಂದೂ ಕ್ಷಮಿಸುವದಿಲ್ಲ. ಇಂತಹ ಕಷ್ಟವನ್ನು ಹಿಂದೂ ಮಹಿಳೆ-ಯರು ಮಾತ್ರ ಸಹಿಸುತ್ತಾರೆ. ಇದರಿಂದಲೇ ನಾನು ಯಾವಾಗಲೂ ಸ್ತ್ರೀಯು ಸಹನಶೀಲತೆಯ ಮೂರ್ತಿ-ಯೆಂದು ಎಣಿಸುತ್ತೇನೆ. ನನಗೆ ಅಹಿಂಸಾ ತತ್ವದ ಸೂಕ್ತ ತಿಳಿವಳಿಕೆಯುಂಟಾದ ಮೇಲೆಯೇ ಪತ್ನಿಯ ಮೇಲಿನ ನನ್ನ ಸಂಶಯುವು ಹರಿಯಿತು. ಆಗ ನನಗೆ ಬ್ರಹ್ಮಚರ್ಯದ ಮಹಿಮೆಯು ಗೊತ್ತಾಯಿತು. 'ಪತ್ನಿಯು ಪತಿಯ ದಾಸಿಯಲ್ಲ; ಅವಳು ಆತನ ಸಹಧರ್ಮಚಾರಿಣಿ. ಆವನ ಸುಖದುಃಖಗಳಲ್ಲಿ ಸಮ-ಭಾಗಿನಿ. ಒಳಿತು-ಕೆಡಕು ಮಾಡುವಲ್ಲಿ ಗಂಡನಿಗೆ ಇದ್ದಷ್ಟು ಸ್ವಾತಂತ್ರ್ಯವು ಹೆಂಡತಿಗೂ ಇದೆ' ಎಂದು ನನ್ನ ಅರಿವಿಗೆ ಬಂದಿತು.

## ಕಳ್ಳತನ ಮತ್ತು ಪ್ರಾಯಶ್ಚಿತ್ತ

ನನ್ನ ಆಪ್ತನೊಬ್ಬನ ಸಹಾಯದಿಂದ ನನಗೆ ಬೀಡಿ ಸೇದುವ ಚಟವು ಹತ್ತಿತು. ನನ್ನ ಚಿಕ್ಕಪ್ಪನಿಗೆ ಇದರ ಚಟವಿತ್ತು. ಹೊಗೆಯನ್ನು ಬಿಡುವುದನ್ನು ನೋಡಿ ನನಗೂ ಹಾಗೆ ಮಾಡುವ ಇಚ್ಛೆಯಾಯಿತು. ಆದರೆ ನಮ್ಮ ಹತ್ತಿರವೇನೂ ದುಡ್ಡು ಇರಲಿಲ್ಲ. ಆದುದರಿಂದ ಚಿಕ್ಕಪ್ಪನು ಸೇದಿ ಒಗೆದ ಕೊರೆ ಚುಟ್ಟಿಗಳನ್ನು ಕದ್ದು ತರಹತ್ತಿದೆವು. ಆದರೆ ಆ ತುಂಡುಗಳು ಯಾವಾಗಲೂ ಸಿಗುತ್ತಿರಲಿಲ್ಲ. ಆದುದರಿಂದ ನೌಕರರ ಹಣದೊಳಗಿಂದ ಒಂದೆರಡು ದುಡ್ಡುಗಳನ್ನು ಕದ್ದು ಬೀಡಿಗಳನ್ನು ಕೊಂಡು ಕೊಳ್ಳತೊಡಗಿದೆವು. ಆದರೆ ಇದರಿಂದ ಸಮಾಧಾನ-ವಾಗಲಿಲ್ಲ. ಹಿರಿಯರ ಅಪ್ಪಣೆಯಿಲ್ಲದೆ ಯಾವುದನ್ನೂ ಮಾಡಲಾಗದು ಎಂಬ ವಿಚಾರವು ಅಸಹ್ಯವಾಯಿತು. ನಾವು ಆತ್ಮಹತ್ಯ ಮಾಡಿಕೊಳ್ಳಬೇಕೆಂದು ನಿರ್ಧರಿಸಿದೆವು.

ಧತ್ತೂರಿನ ಬೀಜಗಳನ್ನು ತಿನ್ನುವುದರಿಂದ ಸಾಯು-ತ್ತಾರೆಂದು ನಾವು ಕೇಳಿದ್ದೆವು. ಅಡವಿಯಲ್ಲಿ ತಿರುಗಾಡಿ ಬೀಜಗಳನ್ನು ತಂದೆವು. ಸಾಯಲು ಸಂಜೆಯ ಸಮಯ-

ವನ್ನು ಗೊತ್ತುಮಾಡಿದೆವು. ಕೇದಾರನಾಥ ದೇವಸ್ಥಾನದ ದೀಪಮಾಲೆಯಲ್ಲಿ ತುಪ್ಪವನ್ನು ಹಾಕಿ, ದೇವರ ದರ್ಶನ ಪಡೆದು ಏಕಾಂತ ಸ್ಥಳಕ್ಕೆ ಹೋದೆವು ಆದರೆ ವಿಷವನ್ನು ತಿನ್ನುವ ಧೈರ್ಯವಾಗಲಿಲ್ಲ. ಮರಣಕ್ಕೆ ಅಂಜಿದೆವು. ರಾಮಮಂದಿರದಲ್ಲಿ ದೇವರ ದರ್ಶನ ಮಾಡಿಕೊಂಡು, ಮೌನವಾಗಿ ಕುಳಿತುಕೊಳ್ಳಬೇಕೆಂಬ ನಿರ್ಧಾರಕ್ಕೆ ಬಂದೆವು.

ಆತ್ಮಹತ್ಯೆಯ ವಿಚಾರ ಮಾಡುವುದು ಸುಲಭ; ಆದರೆ ಆತ್ಮಹತ್ಯೆ ಮಾಡಿಕೊಳ್ಳುವುದು ಸುಲಭವಲ್ಲ. ಆದ್ದರಿಂದ ಆತ್ಮಹತ್ಯೆ ಮಾಡಿಕೊಳ್ಳುತ್ತೇನೆಂದು ಯಾರಾದರೂ ಹೆದರಿಸಿದರೆ ಅದರ ಪರಿಣಾಮವು ನನ್ನ ಮೇಲೆ ಏನೂ ಆಗುವದಿಲ್ಲವೆಂದರೂ ಅಡ್ಡಿಯಿಲ್ಲ.

ಇದಾದ ಮೇಲೆ ಬೀಡಿ ಸೇದುವ ಚಟವನ್ನು ಬಿಟ್ಟು ಬಿಟ್ಟೆವು. ನಾನು ಯಾವಾಗಲೂ ಈ ಚಟವು ಅನಾಗರಿಕವಾದುದು, ಹಾನಿಕರವಾದುದು ಹಾಗೂ ಹೊಲಸಾದುದು ಎಂದು ತಿಳಿಯುತ್ತ ಬಂದಿದ್ದೇನೆ. ಉಗಿಬಂಡಿಯ ಡಬ್ಬೆಗಳಲ್ಲಿ ಬೀಡಿ ಹೊಗೆಯು ಹೊರಟಾಗಲೆಲ್ಲ ನನಗೆ ಅಲ್ಲಿ ಕುಳಿತುಕೊಳ್ಳುವುದಾಗುವುದಿಲ್ಲ. ನನ್ನ ಉಸಿರು ಕಟ್ಟುತ್ತದೆ.

ಬೇರೊಂದು ಕಳವನ್ನೂ ನಾನು ಮಾಡಿದ್ದೇನೆ. ಇದು ಮೊದಲಿನದಕ್ಕಿಂತಲೂ ಹೆಚ್ಚು ಗಂಭೀರವಾದು-

ದೆಂದು ನನ್ನ ಎಣಿಕೆ. ನನ್ನ ಅಣ್ಣನ ಬಂಗಾರದ ಕಡಗದ ತುಂಡನ್ನು ಕದ್ದದ್ದೇ ಈ ಕಳ್ಳತನವು. ಅವನು ಸುಮಾರು ೨೫ ರೂಪಾಯಿಗಳ ಸಾಲ ಮಾಡಿದ್ದನು; ಕಡಗವನ್ನು ಮುರಿದು ಅದನ್ನು ತೀರಿಸಿದೆವು. ಆದರೆ ನನಗೆ ಈ ಘಟನೆಯು ಅಸಹ್ಯವಾಯಿತು. ತಂದೆಯುವರ ಎದುರು ತಪ್ಪನ್ನು ಒಪ್ಪಿಕೊಳ್ಳಬೇಕೆಂದು ಮನಸ್ಸು ಮಾಡಿದೆನು.

ಕೊನೆಗೆ ನಾನು ಒಂದು ಪತ್ರವನ್ನು ಬರೆದು ತಪ್ಪನ್ನು ಒಪ್ಪಿಕೊಂಡು ಕ್ಷಮೆಯನ್ನು ಕೋರಬೇಕೆಂದು ನಿಶ್ಚಯಿಸಿದೆನು. ಓಲೆಯನ್ನು ಬರೆದು ಕಂಪಿಸುವ ಕೈಗಳಿಂದ ಅದನ್ನು ತಂದೆಯುವರ ಕೈಯಲ್ಲಿ ಕೊಟ್ಟು ಅವರ ಮಂಚದ ಮುಂದೆ ಕುಳಿತುಕೊಂಡೆನು. ಅವರು ಪತ್ರವನ್ನು ಓದಿದರು. ಅವರ ಕಣ್ಣುಗಳಿಂದ ಮುತ್ತಿ-ನಂತಹ ಹನಿಗಳು ಉದುರಿದವು. ಪತ್ರವು ಒದ್ದೆ-ಯಾಯಿತು. ಕ್ಷಣಹೊತ್ತು ಅವರು ಕಣ್ಣುಗಳನ್ನು ಮುಚ್ಚಿಕೊಂಡರು. ಪತ್ರವನ್ನು ಹರಿದುಹಾಕಿದರು. ಪತ್ರವನ್ನು ಓದಲಿಕ್ಕೆಂದು ಎದ್ದು ಕುಳಿತವರು ಮತ್ತೆ ಒರಗಿದರು.

ನಾನೂ ಅತ್ತೆನು. ತಂದೆಯುವರಿಗೆ ಎಷ್ಟು ದುಃಖವಾಗಿರಬೇಕು ಎಂಬುದರ ಕಲ್ಪನೆಯು ನನಗೆ ಬಂದಿತು. ಈ ಮುತ್ತಿನ ಬಿಂದುಗಳ ಪ್ರೇಮಬಾಣವು ನನ್ನನ್ನು ವೇಧಿಸಿತು. ನಾನು ಪರಿಶುದ್ಧನಾದೆನು.

'ರಾಮಬಾಣ ವಾಗ್ಯಾಂ ರೇ ಹೋಯ ತೇ ಜಾಣ' (ರಾಮಬಾಣದ ಅನುಭವವು ಯಾರಿಗಿದೆಯೋ ಅವರೇ ಆ ಶಕ್ತಿಯನ್ನು ಬಲ್ಲರು.)

ನನ್ನ ಮಟ್ಟಿಗೆ ಇದು ಅಹಿಂಸೆಯ ಮಾದರಿ ಪಾಠ-ವಾಯಿತು. ಇಂತಹ ಅಹಿಂಸೆಯು ವ್ಯಾಪಕ ಸ್ವರೂಪ ವನ್ನು ತಾಳಿದಾಗ ಅದು ಯಾರನ್ನು ಸ್ಪರ್ಶಿಸುತ್ತದೆಯೋ ಅವರು ಕಾಯಾ ಪಲ್ಲಟವಾಗುತ್ತಾರೆ. ಇಂತಹ ವ್ಯಾಪಕ ಅಹಿಂಸೆಯ ಬಲವನ್ನು ಅಳೆಯುವುದು ಸಾಧ್ಯವಿಲ್ಲ. ಮನುಷ್ಯನು ಅಧಿಕಾರಿ ಪುರುಷನ ಮುಂದೆ ಸ್ವಸಂತೋಷ ದಿಂದ ತಪ್ಪನ್ನು ಒಪ್ಪಿಕೊಳ್ಳುವುದು ಮತ್ತು ಅದನ್ನು ಪುನಃ ಎಂದೂ ಮಾಡುವುದಿಲ್ಲವೆಂದು ಪ್ರತಿಜ್ಞೆ ಮಾಡುವುದು ಅಂದರೆ ಶುದ್ಧವಾದ ಪ್ರಾಯಶ್ಚಿತ್ತವನ್ನು ಮಾಡಿದಂತಾಗುವುದು.

## ತಂದೆಯವರ ನಿಧನ ಹಾಗೂ ನನ್ನ ನಾಚಿಕೆ

ತಂದೆಯವರು ತಮ್ಮ ಅನಾರೋಗ್ಯದ ಮೂಲಕ ಹಾಸುಗೆಯ ಮೇಲೆ ಒರಗಿಯೇ ಇರುತ್ತಿದ್ದರು. ನಾನು ಪರಿಚಾರಕನ ಕೆಲಸವನ್ನು ಮಾಡುತ್ತಿದ್ದೆನು. ಗಾಯವನ್ನು ತೊಳೆಯುವುದು, ಅದರಲ್ಲಿ ಔಷಧವನ್ನು ಹಾಕುವುದು, ಮುಲಾಮು ಹಚ್ಚುವುದು, ಔಷಧವನ್ನು ಕುಡಿಸುವುದು, ಪ್ರಸಂಗಬಿದ್ದಲ್ಲಿ ಮನೆಯಲ್ಲಿಯೇ ಮದ್ದನ್ನು ಸಿದ್ಧಗೊಳಿಸುವುದು- ಇವು ನನ್ನ ವಿಶೇಷ ಕೆಲಸಗಳಾಗಿದ್ದುವು. ದಿನಾಲು ರಾತ್ರಿ ಅವರ ಕಾಲುಗಳನ್ನು ಒತ್ತುವುದು, ಅವರು ಹೋಗೆಂದಾಗ ಅಥವಾ ಅವರಿಗೆ ನಿದ್ದೆ ಹತ್ತಿದ ಮೇಲೆ ಹೋಗಿ ಮಲಗುವುದು— ಇದು ನನ್ನ ನಿಯಮವಾಗಿತ್ತು. ಈ ಸೇವೆಯು ನನಗೆ ಬಹಳ ಪ್ರಿಯವಾಗಿತ್ತು.

ರಾತ್ರಿಯ ಹೊತ್ತಿಗೆ ನಾನು ತಂದೆಯವರ ಕಾಲುಗಳನ್ನು ಒತ್ತುತ್ತಿದ್ದರೂ ನನ್ನ ಮನಸ್ಸು ಶಯನಗ್ರಹದತ್ತ ಹರಿದಾಡುತ್ತಿತ್ತು. ಅವರ ಸೇವೆಯಿಂದ ಬಿಡುವು ಸಿಕ್ಕಿದ ಕೂಡಲೇ ನನಗೆ ಆನಂದವಾಗುತ್ತಿತ್ತು. ತಂದೆಯವರಿಗೆ ನಮಸ್ಕರಿಸಿ ನೆಟ್ಟಗೆ ಶಯ್ಯಾಗಾರಕ್ಕೆ ನಡೆದುಬಿಡುತ್ತಿದ್ದೆನು.

ನಿಧನದ ಕಾಳರಾತ್ರಿಯು ಸಮೀಪಿಸಿತು. ಇದೇ ಕೊನೆಯ ರಾತ್ರಿಯಾಗುವುದೆಂದು ಯಾರೂ ತಿಳಿದಿರಲಿಲ್ಲ. ರಾತ್ರಿ ೧೧ ಗಂಟೆಯಾಗಿರಬೇಕು. ನಾನು ಕಾಲುಗಳನ್ನು ಒತ್ತುತ್ತಿದ್ದೆನು. ಚಿಗಪ್ಪನವರು ಹೇಳಿದರು: "ನೀನು ಹೋಗು; ಈಗ ನಾನು ಕುಳಿತುಕೊಳ್ಳುವೆನು." ನಾನು ಸಂತೋಷಪಟ್ಟು ನೆಟ್ಟಗೆ ಶಯನಗೃಹಕ್ಕೆ ನಡೆದುಬಿಟ್ಟೆನು. ಐದೇ ನಿಮಿಷಗಳು ಸಂದಿರಬೇಕು; ಅಷ್ಟರಲ್ಲಿ ಸೇವಕನು ಕಪವನ್ನು ತಟ್ಟಿದನು. ನಾನು ಗಾಬರಿಯಾದೆನು. "ಏಳಿರಿ, ತಂದೆಯವರ ಸ್ಥಿತಿಯು ಬಹಳ ಕೆಟ್ಟಿದೆ" ಎಂದು ಸೇವಕನು ಹೇಳಿದನು.

"ಏನು ಸುದ್ದಿ? ಹೇಳು" ಎಂದೆನು.

"ತಂದೆಯವರು ತೀರಿಕೊಂಡರು." ಎಂದು ಅವನೆಂದನು.

"ತಂದೆಯವರು ಸನ್ನೆ ಮಾಡಿ ಲೇಖನಸಾಮಗ್ರಿಯನ್ನು ತರಿಸಿ 'ಸಿದ್ಧತೆ ಮಾಡಿರಿ' ಎಂದು ಬರೆದರು. ಇಷ್ಟು ಬರೆದು ತಮ್ಮ ಕೈಗೆ ಕಟ್ಟಿದ ತಾಯತವನ್ನು ಹರಿದೊಗೆದರು; ಬಂಗಾರದ ಸರವನ್ನು ಕಿತ್ತೆಸೆದರು. ಅಷ್ಟರಲ್ಲಿ ಅವರ ಪ್ರಾಣಪಕ್ಷಿಯು ಹಾರಿಹೋಗಿತ್ತು."

ನಾನು ಬಹಳ ಲಜ್ಜಿತನೂ ದುಃಖಿತನೂ ಆದೆನು. ನಾನು ವಿಷಯಾಂಧನಾಗಿರದಿದ್ದರೆ, ಅಂತ್ಯಕಾಲದಲ್ಲಿ ಈ ವಿಯೋಗವು ನನ್ನ ಪಾಲಿಗೆ ಬರುತ್ತಿದ್ದಿಲ್ಲವಲ್ಲ. ನಾನು ಕೊನೆಯ ಗಳಿಗೆಯ ವರೆಗೂ ತಂದೆಯ ಪಾದಗಳನ್ನು ಒತ್ತುತ್ತಿರುತ್ತಿದ್ದೆನಲ್ಲ ಎಂದು ಮರುಗಿದೆನು.

## ಧರ್ಮದ ಬೆಳಕು

ನಾನು ವೈಷ್ಣವ ಸಂಪ್ರದಾಯದಲ್ಲಿ ಹುಟ್ಟಿದವ-ನಾದುದರಿಂದ ನನಗೆ ಹವೇಲಿಗೆ (ವೈಷ್ಣವ ಮಂದಿರಕ್ಕೆ) ಹೋಗುವ ಪ್ರಸಂಗವು ಮೇಲಿಂದ ಮೇಲೆ ಬರುತ್ತಿತ್ತು. ಆದರೆ ಆದರ ವಿಷಯಕ್ಕೆ ನನ್ನಲ್ಲಿ ಶ್ರದ್ಧೆ ಹುಟ್ಟಲಿಲ್ಲ. ಮಂದಿರದ ವೈಭವವು ನನ್ನ ಮನಸ್ಸಿಗೆ ಸರಿಬರಲಿಲ್ಲ. ಅಲ್ಲಿ ನಡೆಯುವ ಅನಾಚಾರಗಳನ್ನು ಕೇಳಿ ನನಗೆ ದುಃಖವಾಯಿತು. ಮಂದಿರದಿಂದ ನನಗೆ ಯಾವ ಪ್ರಯೋಜನವೂ ಆಗಲಿಲ್ಲ.

ಮಂದಿರದಲ್ಲಿ ದೊರೆಯದಿದ್ದ ವಸ್ತು ನನಗೆ ನನ್ನ ದಾಯಿಯಿಂದ ಸಿಕ್ಕಿತು. ನನಗಿನ್ನೂ ಅವಳ ಪ್ರೇಮದ ನೆನಪಿದೆ. ನಾನು ಭೂತ ಪಿಶಾಚಿಗಳಿಗೆ ಅಂಜುತ್ತಿದ್ದೆನು. ಇದಕ್ಕೆ ಔಷಧವು ರಾಮನಾಮವೆಂದು ನಮ್ಮ ದಾಯಿ-ಯಾದ ರಂಭೆಯು ನನಗೆ ಹೇಳಿಕೊಟ್ಟಳು. ಇಂದು ರಾಮನಾಮವು ನನಗೊಂದು ಅಮೋಘ ಶಕ್ತಿಯಾಗಿದೆ. ಅದಕ್ಕೆ ಕಾರಣವು ರಂಭಾಬಾಯಿಯು ಬಿತ್ತಿದ ಬೀಜವೇ ಎಂದು ನನ್ನ ನಂಬುಗೆ.

ನನ್ನ ಚಿಕ್ಕಪ್ಪನ ಮಗನೊಬ್ಬನು ನಾವಿಬ್ಬರೂ ಅಣ್ಣ-ತಮ್ಮಂದಿರಿಗೆ ರಾಮರಕ್ಷಾಸ್ತೋತ್ರವನ್ನು ಕಲಿಸುವ ಏರ್ಪಾಡು ಮಾಡಿದನು. ನಾವು ಪ್ರಾತಃಕಾಲದ ಸ್ನಾನ-ವಾದಮೇಲೆ ದಿನಾಲು ಅದನ್ನು ಪಠಿಸುವ ನಿಯಮ-ವನ್ನಿಟ್ಟುಕೊಂಡೆವು.

ನನ್ನ ಮನಸ್ಸಿನ ಮೇಲೆ ಆಳವಾದ ಪರಿಣಾಮವನ್ನು ಮಾಡಿದ ಸಂಗತಿಯೆಂದರೆ ರಾಮಾಯಣದ ಪಾರಾಯಣ. ಪೋರಬಂದರದಲ್ಲಿದ್ದಾಗ ತಂದೆಯವರು ದಿನಾಲು ರಾತ್ರಿ ರಾಮದೇವರ ಗುಡಿಯಲ್ಲಿ ರಾಮಾಯಣವನ್ನು ಕೇಳು-ತ್ತಿದ್ದರು. ಕಥೆ ಹೇಳುವವರು ಬಿಲೇಶ್ವರದ ಲಾಧಾ ಮಹಾರಾಜರು. ಅವರಿಗೆ ಹಿರೇಬೇನೆ ಹತ್ತಿತ್ತೆಂದು ಜನರು ಅನ್ನುತ್ತಿದ್ದರು. ಆದಕ್ಕೆ ಅವರು ಯಾವ ಔಷಧೋಪಚಾರವನ್ನೂ ಮಾಡಲಿಲ್ಲ. ಅದರ ಬದಲು ಮಹಾದೇವರಿಗೆ ಏರಿಸಿದ ಬಿಲ್ವಪತ್ರಗಳನ್ನು ಕುಷ್ಠ ಹತ್ತಿದ ಸ್ಥಳದಲ್ಲಿ ಕಟ್ಟುತ್ತಿದ್ದರು. ಹಾಗೂ ರಾಮಾ-ಯಣದ ಜಪವನ್ನು ಮಾಡುತ್ತಿದ್ದರು. ಇದರಿಂದ ಅವರ ಕುಷ್ಠರೋಗವು ಆಮೂಲಾಗ್ರವಾಗಿ ವಾಸಿಯಾಯಿತು. ಲಾಧಾ ಮಹಾರಾಜರ ಕಂಠವು ಮೃದುವಾಗಿತ್ತು. ತಾವು ಸ್ವತಃ ಭಕ್ತಿರಸದಲ್ಲಿ ಲೀನರಾಗುತ್ತಿದ್ದರಲ್ಲದೆ ಶ್ರೋತೃ-ಗಳೂ ತಲ್ಲೀನರಾಗುವಂತೆ ಮಾಡುತ್ತಿದ್ದರು. ರಾಮಾ ಯಣದ ಮೇಲಿನ ನನ್ನ ಗಾಢವಾದ ಭಕ್ತಿಗೆ ಈ ನನ್ನ

ರಾಮಾಯಣ ಶ್ರವಣನೇ ತಳಹದಿಯಾಗಿದೆ. ಇಂದು ನಾನು ತುಳಸೀ ರಾಮಾಯಣವನ್ನು ಭಕ್ತಿಮಾರ್ಗದ ಒಂದು ಸರ್ವೋತ್ಕೃಷ್ಟ ಗ್ರಂಥವೆಂದು ತಿಳಿಯುತ್ತೇನೆ.

ರಾಜಕೋಟದಲ್ಲಿ ಪ್ರತಿ ಏಕಾದಶಿಗೂ ಭಾಗವತ ಪುರಾಣವು ನಡೆಯುತ್ತಿತ್ತು. ಆದರೆ ಪುರಾಣಿಕರು ಅದನ್ನು ರಸಭರಿತವಾಗಿ ಹೇಳುತ್ತಿರಲಿಲ್ಲ. ಭಾಗವತವು ಭಕ್ತಿರಸವನ್ನು ಹುಟ್ಟಿಸಬಲ್ಲ ಗ್ರಂಥವೆಂದು ನಾನು ಇಂದು ಹೇಳಬಲ್ಲೆನು.

ರಾಜಕೋಟದಲ್ಲಿ ನನಗೆ ಸಹಜವಾಗಿ ಎಲ್ಲ ಸಂಪ್ರದಾಯಗಳನ್ನೂ ಸಮಭಾವದಿಂದ ನೋಡುವ ಶಿಕ್ಷಣವು ದೊರೆಯಿತು. ಏಕೆಂದರೆ ತಂದೆ-ತಾಯಿಗಳು ವಿಷ್ಣುವಿನ ದೇವಸ್ಥಾನಕ್ಕೂ, ಶಿವಾಲಯಕ್ಕೂ, ರಾಮದೇವರ ಗುಡಿಗೂ ಹೋಗುತ್ತಿದ್ದರು; ಅಲ್ಲದೆ ತಮ್ಮ ಜೊತೆಗೆ ನನ್ನನ್ನೂ ಕರೆದೊಯ್ಯುತ್ತಿದ್ದರು.

ಇದಲ್ಲದೆ ತಂದೆಯವರ ಕಡೆಗೆ ಜೈನ ಸಾಧುಗಳು ಒಬ್ಬರಿಲ್ಲೊಬ್ಬರು ಬರುತ್ತಿದ್ದರು. ತಂದೆಯವರು ಅವರಿಗೆ ಭಿಕ್ಷೆಯನ್ನೂ ಕೊಡುತ್ತಿದ್ದರು. ಇದೂ ಅಲ್ಲದೆ, ತಂದೆಯವರಿಗೆ ಮುಸಲ್ಮಾನ ಹಾಗು ಪಾರಸಿ ಮಿತ್ರರೂ ಇದ್ದರು. ಅವರು ತಮ್ಮ ತಮ್ಮ ಧರ್ಮದ ವಿಷಯವಾಗಿ ಮಾತಾಡುತ್ತಿದ್ದರು. ಪಿತಾಜಿಯವರು ಅದನ್ನು ಕೇಳು-

ತ್ತಿದ್ದರು. ಹೀಗಾಗಿ ನನ್ನ ಮನಸ್ಸಿನಲ್ಲಿ ಎಲ್ಲ ಧರ್ಮಗಳ ಬಗ್ಗೆ ಸಮಭಾವವು ಉತ್ಪನ್ನವಾಯಿತು.

ಇದಕ್ಕೆ ಕ್ರಿಶ್ಚಿಯನ್ ಧರ್ಮವು ಮಾತ್ರ ಅಪವಾದ-ವಾಗಿತ್ತು. ಹೈಸ್ಕೂಲ ಹತ್ತಿರದ ಚೌಕಿನಲ್ಲಿ ನಿಂತು ವ್ಯಾಖ್ಯಾನಗಳನ್ನು ಕೊಡುತ್ತಿದ್ದ ಪಾದ್ರಿಗಳು ಹಿಂದೂ ದೇವತೆಗಳನ್ನು ನಿಂದಿಸುತ್ತಿದ್ದರು. ಇದು ನನಗೆ ಸಹನವಾಗುತ್ತಿರಲಿಲ್ಲ. ಇದೇ ಸಮಯಕ್ಕೆ ಒಬ್ಬ ಹಿಂದುವು ಕ್ರಿಶ್ಚಿಯನ್ ಆದ ಸುದ್ದಿಯನ್ನು ನಾನು ಕೇಳಿದೆನು. ತಮ್ಮ ಧರ್ಮದಲ್ಲಿ ತೆಗೆದುಕೊಳ್ಳುವ ಕಾಲಕ್ಕೆ ಅವನಿಗೆ ಗೋಮಾಂಸವನ್ನು ತಿನ್ನಿಸಿದರೆಂದೂ ಮದ್ಯವನ್ನು ಕುಡಿಸಿದರೆಂದೂ ಮತ್ತು ಅವನು ಈಗ ಕೋಟು, ಪಾಟಲೂನು, ಹ್ಯಾಟನ್ನು ಧರಿಸಿ, ಊರಲ್ಲಿ ಅಡ್ಡಾಡು-ತ್ತಿದ್ದಾನೆಂದೂ ಜನರು ಮಾತನಾಡುತ್ತಿದ್ದರು. ಇವೆಲ್ಲವೂ ನನ್ನ ಮನಸ್ಸಿಗೆ ಚುಚ್ಚತೊಡಗಿತು.

ಆದರೆ ಒಂದು ವಿಷಯವು ನನ್ನ ಮನಸ್ಸಿನಲ್ಲಿ ಆಳವಾಗಿ ಬೇರೂರಿತು— ಅದೆಂದರೆ, ನೀತಿಯು ಜಗತ್ತಿನ ಆಧಾರ, ಈ ನೀತಿಯು ಸತ್ಯದಲ್ಲಿಯೇ ಅಡಕವಾಗಿದೆ. ಸತ್ಯಶೋಧನೆಯನ್ನು ಮಾಡಲೇಬೇಕಾಗುವುದು. ದಿನ-ದಿನವೂ ಸತ್ಯದ ಮಹಿಮೆಯು ನನ್ನ ದೃಷ್ಟಿಯಲ್ಲಿ ಹೆಚ್ಚಾ-ಗುತ್ತ ಬಂದಿತು. ಸತ್ಯದ ಲಕ್ಷಣವು ವಿಸ್ತಾರಗೊಳ್ಳುತ್ತ ಹೋಯಿತು. ಅದು ಇನ್ನೂ ವಿಸ್ತಾರವಾಗುತ್ತಲೇ ಇದೆ.

ಗುಜರಾಥಿಯಲ್ಲಿಯ ಒಂದು ಶ್ಲೋಕವೂ ನನ್ನ ಹೃದಯದಲ್ಲಿ ನಾಟಿತು. "ಅಪಕಾರಕ್ಕೆ ಅಪಕಾರವನ್ನು ಮಾಡದೆ ಉಪಕಾರವನ್ನೇ ಮಾಡಬೇಕು" ಎಂಬ ಮಾತು ನನ್ನ ಜೀವನಸೂತ್ರವಾಗಿ ಪರಿಣಮಿಸಿತು. ಅಪಕಾರಿಗೆ ಒಳಿತನ್ನು ಬಯಸುವುದು ಮತ್ತು ಒಳಿತನ್ನು ಮಾಡುವುದು ನನ್ನ ಪ್ರೀತಿಯ ವಿಷಯವಾಯಿತು. ಆ ವಿಷಯದಲ್ಲಿ ಅನೇಕ ಪ್ರಯೋಗಗಳನ್ನೂ ಮಾಡಿದೆನು. ನನ್ನ ಮನಸ್ಸಿನ ಮೇಲೆ ಪ್ರಭಾವವನ್ನು ಮಾಡಿದ ಆ ಚಮತ್ಕಾರಿಯಾದ ಕವನವು ಹೀಗಿದೆ:—

ಬರಿ ನೀರನಿತ್ತವಗೆ ಮೃಷ್ಟಾನ್ನವಿತ್ತು
ಅರೆನಮಿಸಿದಂಥವಗೆ ದೇಹವನೆ ಕೊಟ್ಟು ।
ಅರೆಕಾಸನಿತ್ತವಗೆ ವರಹಗಳ ನೀಡಿ
ಹರಣವಂ ಕಾಯ್ದವಗೆ ಹರಣವನೆ ಸಲಿಸಿ ॥

ಕಿರಿನೆರವಿನಿತ್ತರ್ಗೆ ಪಿರಿದಾಗಿ ಮಾರ್ಗುಡುವ
ಪರಿಯೆ ಅರಿಪರ ತೆರನದೆಂದು ಅರಿಯಯ್ಯ ।
ಪಿರಿಬಗೆಯ ಸಂತಜನ ನರರೊಳಂತರವಿಡದೆ
ಹರುಷದಿಂ ಕೇಡುಗಳಿಗೊಳಿತನೆಸಗುವರವರು ॥

[ನಮಗೆ ನೀರನ್ನು ಕೊಟ್ಟವನಿಗೆ ಅನ್ನವನ್ನು ಉಣಿಸ ಬೇಕು. ನಮ್ಮ ಮುಂದೆ ತಲೆಬಾಗುವವನಿಗೆ ನಾವು ಸಾಷ್ಟಾಂಗ ಪ್ರಣಾಮವನ್ನು ಮಾಡಬೇಕು. ತಾಮ್ರದ ದುಡ್ಡು ಕೊಡುವವನಿಗೆ ನಾವು ಬಂಗಾರದ ನಾಣ್ಯವನ್ನು

ಕೊಡಬೇಕು. ನಮ್ಮ ಪ್ರಾಣವುಳಿಸಿದವನ ದುಃಖವನ್ನು ನೀಗಿಸಲು ನಾವು ಸಾಯಬೇಕು. ನಮಗೆ ಒಳಿತನ್ನು ಮಾಡಿದವನಿಗೆ ಕಾಯಾ ವಾಚಾ ಮನಸಾ ಹತ್ತು ಪಟ್ಟು ಒಳಿತನ್ನು ಮಾಡಬೇಕು. ಕೆಡಕು ಮಾಡಿದವನಿಗೆ ಹಿತವನ್ನು ಮಾಡಿದವನು ವಿಶ್ವವಿಜಯಿಯಾಗುತ್ತಾನೆ.]

# ವಿಲಾಯತಿಗೆ ಹೋಗುವ ಸಿದ್ಧತೆ

ನಾನು ೧೮೮೭ನೆಯ ಇಸವಿಯಲ್ಲಿ ಮ್ಯಾಟ್ರಿಕ್ ಪರೀಕ್ಷೆಯಲ್ಲಿ ತೇರ್ಗಡೆಯಾದೆನು. ಪರೀಕ್ಷೆಯು ಅಹಮ್ಮದಾಬಾದದಲ್ಲಿ ನಡೆಯಿತು. ನಾನು ರಾಜಕೋಟದಿಂದ ಅಹಮ್ಮದಾಬಾದಕ್ಕೆ ಒಬ್ಬೊಂಟಿಗನಾಗಿ ಪ್ರವಾಸ ಮಾಡಿದುದು ಇದೇ ಮೊದಲನೆಯ ಸಲ.

ಭಾವನಗರದಲ್ಲಿಯ ಶಾಮಲದಾಸ ಕಾಲೇಜಿನಲ್ಲಿ, ಮೊದಲನೆಯ 'ಟರ್ಮ್'ನ್ನು ಮುಗಿಸಿ ನಾನು ಮನೆಗೆ ಬಂದೆನು.

ಮಾವಜೀ ದವೆ ಅವರು ಈ ಬಿಡುವಿನಲ್ಲಿ ಮನೆಗೆ ಬಂದಿದ್ದರು. ನಾನು ಶಾಮಲದಾಸ ಕಾಲೇಜಿನಲ್ಲಿ ಓದುತ್ತಿರುವುದನ್ನು ಕೇಳಿ ಅವರು ನಮ್ಮ ತಾಯಿಗೆ ಹೇಳಿದರು: "ಈಗ ಕಾಲವು ಬದಲಾಗಿದೆ. ಕಬಾ ಗಾಂಧಿಯವರ ಪೀಠವನ್ನೇರಲು ನಿಮ್ಮಲ್ಲಿ ಯಾರಾದರೂ ಇಚ್ಛಿಸುತ್ತಿದ್ದರೆ, ಶಿಕ್ಷಣ ಪಡೆದ ಹೊರತು ಅದು ಸಾಧ್ಯವಿಲ್ಲ. ವಿಲಾಯತಿಯಲ್ಲಿ ವಿದ್ಯಾಭ್ಯಾಸಕ್ಕಾಗಿ ನೀವು

ಮೋಹನನನ್ನು ಕಳಿಸಬೇಕು. ಅಲ್ಲಿಯ ಶಿಕ್ಷಣವು ಸುಲಭವಾಗಿದೆಯೆಂದು ಕೇವಲರಾಯನು (ಮಾವಜಿ ದವೇಯ ಮಗ) ಅನ್ನುತ್ತಾನೆ."

ಅಲ್ಲದೆ, ಅವರು ಮತ್ತೆ ನನ್ನ ಕಡೆಗೆ ಹೊರಳಿ "ನೀನು ಇಲ್ಲಿ ಕಲಿಯುವುದಕ್ಕಿಂತ ವಿಲಾಯತಿಗೆ ಏಕೆ ಹೋಗಬಾರದು ?" ಎಂದು ನನ್ನನ್ನು ಕೇಳಿದರು.

ಇದು ನನಗೆ ಮನ ಒಪ್ಪುವ ಒಳ್ಳೆಯ ಸಲಹೆಯಾಗಿತ್ತು. ನಾನೆಂದೆ "ವಿಲಾಯತಿಗೆ ಕಳುಹಿಸಿದರೆ ಬಹಳ ಒಳಿತು; ನನಗೆ ವೈದ್ಯಕೀಯ ಅಭ್ಯಾಸವನ್ನು ಮಾಡಲು ಕಳುಹಿಸಿಕೊಡಬಾರದೇಕೆ ?"

"ವೈದ್ಯಕೀ ಪರೀಕ್ಷೆ ಕೊಟ್ಟು ದಿವಾಣನಾಗುವುದು ಸಾಧ್ಯವಿಲ್ಲ. ಇದಕ್ಕಾಗಿ ಬ್ಯಾರಿಸ್ಟರನಾಗುವುದರಲ್ಲಿಯೇ ಜಾಣತನವಿದೆ."

ನಾನು ಗಾಳಿಗೋಪುರವನ್ನು ಕಟ್ಟತೊಡಗಿದೆನು. ಆದರೆ ಹಣದ ವ್ಯವಸ್ಥೆಯೇನು ? ಅಣ್ಣನವರು ಒಂದು ವಿಚಾರವನ್ನು ಸೂಚಿಸಿದರು. "ಪೋರಬಂದರ ರಾಜ್ಯದ ಮೇಲೆ ನಮ್ಮ ಹಕ್ಕು ಇದೆ. ಶಾಸಕ (ಎಡ್ಮಿನಿಸ್ಟ್ರೇಟರ) ರಾದ ಲೇಲಿ ಸಾಹೇಬರು ರಾಜ್ಯದ ಪರವಾಗಿ ನಿನಗೆ ಕೆಲವು ಮಟ್ಟಿಗೆ ಸಹಾಯವನ್ನು ಮಾಡಬಹುದು."

ನಾನು ಪೋರಬಂದರಕ್ಕೆ ಹೋಗಲು ಸಿದ್ಧನಾದೆನು. ಆ ಕಾಲದಲ್ಲಿ ರೈಲುದಾರಿ ಇರಲಿಲ್ಲ. ಎತ್ತಿನ ಬಂಡಿಯಲ್ಲಿ

ಐದು ದಿನಗಳ ಹಾದಿ ಇತ್ತು. ದೋರಾಜಿಯ ತನಕ ಹೋಗಲು ನಾನು ಎತ್ತಿನ ಬಂಡಿಯನ್ನು ಬಾಡಿಗೆಗೆ ಹಿಡಿದೆನು. ಒಂದು ದಿನ ಮುಂಚಿತವಾಗಿಯೇ ಮುಟ್ಟಲೆಂದು ಒಂಟೆಯನ್ನು ಗೊತ್ತು ಮಾಡಿದೆನು.

ಪೋರಬಂದರವನ್ನು ಮುಟ್ಟಿದ್ದಾಯಿತು. ಲೇಲಿ ಸಾಹೇಬರನ್ನು ಭೆಟ್ಟಿಯಾದೆನು. ಅವರು "ಮೊದಲು ಬಿ. ಎ. ಪಾಸಾಗು; ಆಮೇಲೆ ನನ್ನನ್ನು ಭೆಟ್ಟಿಯಾಗು. ಈಗಲೇ ಯಾವ ಸಹಾಯವನ್ನೂ ಕೊಡುವುದು ಸಾಧ್ಯವಿಲ್ಲ." ಎಂದು ಅಂದರು.

ಪೋರಬಂದರದಿಂದ ರಾಜಕೋಟಕ್ಕೆ ಬಂದು ನಡೆದುದೆಲ್ಲವನ್ನೂ ತಿಳಿಸಿದೆನು. ಹೆಂಡತಿಯ ಆಭರಣಗಳನ್ನು ಮಾರಿಬಿಡಬೇಕೆಂದೂ ಸೂಚಿಸಿದೆನು. ಆದರೆ ಅಣ್ಣನವರು ಒಂದಿಲ್ಲೊಂದು ರೀತಿಯಿಂದ ಹಣದ ವ್ಯವಸ್ಥೆಯನ್ನು ಮಾಡುವ ಹೊಣೆಹೊತ್ತರು.

ಆದರೆ ತಾಯಿಯವರು ಸಮ್ಮತಿ ಕೊಡುವುದೆಂತು? ನವಯುವಕರು ವಿಲಾಯತಿಗೆ ಹೋಗಿ ಕೆಡುತ್ತಾರೆಂದು ಒಬ್ಬನು ಹೇಳಿದನು. ಅವರು ಮಾಂಸವನ್ನು ತಿನ್ನಲು ಕಲಿಯುತ್ತಾರೆಂದು ಇನ್ನೊಬ್ಬರು ನುಡಿದರು. ಅಲ್ಲಿ ಮದ್ಯವನ್ನು ಕುಡಿದ ಹೊರತು ನಡೆಯುವಹಾಗಿಲ್ಲವೆಂದು ಮಗುದೊಬ್ಬರು ನುಡಿದರು. " ಈ ಮೂರು ಸಂಗತಿ-

ಗಳಿಂದ ದೂರವಿರುವೆ" ಎಂದು ನಾನು ಆಶ್ವಾಸನ ಕೊಟ್ಟೆನು.

ತಾಯಿಯವರೆಂದರು "ನನಗೆ ನಿನ್ನಲ್ಲಿ ವಿಶ್ವಾಸವಿದೆ. ಆದರೆ ನಾನು ಏನು ಮಾಡಬೇಕು ಏನು ಮಾಡಬಾರದು ಎಂಬುದು ನನಗೆ ಹೊಳೆಯದು. ಒಳ್ಳೇದು; ಬೇಚರಜಿ ಮಹಾರಾಜರನ್ನು ಕೇಳೋಣ."

ಬೇಚರಜಿ ಮಹಾರಾಜರು ವೈಶ್ಯರಿದ್ದವರು ಜೈನ ಸಾಧುಗಳಾಗಿ ಪರಿವರ್ತನೆ ಹೊಂದಿದ್ದರು. ಅವರೆಂದರು "ನಾನು ಇವನ ಕಡೆಯಿಂದ ಈ ಮೂರು ಸಂಗತಿಗಳನ್ನು ಕುರಿತು ಪ್ರತಿಜ್ಞೆ ಮಾಡಿಸುತ್ತೇನೆ. ಅನಂತರ ಹೋಗಗೊಡಲು ಏನೂ ಅಡ್ಡಿಯಿಲ್ಲ." ನಾನು ಮಾಂಸ, ಮದ್ಯ, ಮತ್ತು ಸ್ತ್ರೀಯರಿಂದ ದೂರವಿರುವ ಪ್ರತಿಜ್ಞೆಯನ್ನು ಮಾಡಿದೆನು. ಆಗ ಮಾತಾಜಿಯವರು ಅಪ್ಪಣೆಯನ್ನು ದಯಪಾಲಿಸಿದರು.

ಹಿರಿಯರ ಆಶೀರ್ವಾದವನ್ನು ಪಡೆದುಕೊಂಡು ನಾನು ಮುಂಬಯಿಗೆ ಬಂದೆನು. ನಾನು ಮುಂಬಯಿಗೆ ಹೋದದ್ದು ಇದೇ ಮೊದಲನೆಯ ಸಲವಾದುದರಿಂದ ಅಣ್ಣನವರೂ ನನ್ನ ಜೊತೆಗೆ ಬಂದರು.

## ಜಾತಿ ಬಹಿಷ್ಕಾರ

ಇಷ್ಟರಲ್ಲಿ ನಮ್ಮ ಜಾತಿಯಲ್ಲಿ ಗಲಿಬಿಲಿ ಉಂಟಾಯಿತು. ಪಂಚಾಯತವು ಕೂಡಿತು. ಅಲ್ಲಿ ಜಾತಿಯ ಪ್ರಮುಖ ಸೆಟ್ಟಿ ಸಾವುಕಾರರು ನನಗೆಂದರು: "ನೀವು ಇಂಗ್ಲಂಡಿಗೆ ಹೋಗುವುದು ಸರಿಯಾದ ವಿಚಾರವಲ್ಲವೆಂದು ಪಂಚರ ಮತವಿದೆ. ನಮ್ಮ ಧರ್ಮದಲ್ಲಿ ಸಮುದ್ರ ಪ್ರವಾಸವು ನಿಷಿದ್ಧವಿದೆ. ಮೇಲಾಗಿ ವಿಲಾಯತಿಯಲ್ಲಿ ಧರ್ಮದ ಪಾಲನೆಯು ಸರಿಯಾಗಿ ಆಗುವದಿಲ್ಲವೆಂದು ನಾವು ಕೇಳಿದ್ದೇವೆ."

ಇದಕ್ಕೆ ಉತ್ತರವಾಗಿ ನಾನು "ವಿಲಾಯತಿಗೆ ಹೋಗುವುದೇನೂ ಅಧರ್ಮವಲ್ಲ. ನನಗೆ ಅಲ್ಲಿ ಹೋಗಿ ಕೇವಲ ವಿದ್ಯಾಭ್ಯಾಸವನ್ನು ಮಾಡುವುದಿದೆ. ಮೇಲಾಗಿ ತಾವು ಭಯಪಡುವ ವಿಷಯಗಳನ್ನು ಕುರಿತು ನಾನು ತಾಯಿಯ ಸಮಕ್ಷಮದಲ್ಲಿ ಪ್ರತಿಜ್ಞೆ ಮಾಡಿದ್ದೇನೆ." ಎಂದೆನು.

ಕೊನೆಗೆ ಶೇಠಜಿಯವರ ನಿರ್ಣಯವು ಹೊರಬಿತ್ತು. “ಈ ಹುಡುಗನನ್ನು ಇಂದಿನಿಂದ ಜಾತಿಬಹಿಷ್ಕೃತನೆಂದು ತಿಳಿಯತಕ್ಕದ್ದು; ಅವನಿಗೆ ಸಹಾಯ ಮಾಡುವವರು, ಬೀಳ್ಕೊಡಲು ಹೋಗುವವರು ಜಾತಿಯ ವಿರುದ್ಧ ಅಪರಾಧ ಮಾಡಿದಂತೆ ಆಗುವದಲ್ಲದೆ, ಇಂಥವರಿಗೆ ಒಂದು ಕಾಲು ರೂಪಾಯಿ ಜುಲ್ಮಾನೆ ವಿಧಿಸಲಾಗುವದು.”

ಈ ನಿರ್ಣಯದಿಂದ ನನ್ನ ಮನಸ್ಸಿನ ಮೇಲೆ ಯಾವ ಪರಿಣಾಮವೂ ಆಗಲಿಲ್ಲ. ೧೮೮೮ ನೆಯ ಇಸವಿಯ ಸಪ್ಟಂಬರ ೪ನೆಯ ತಾರೀಖಿನ ದಿವಸ ನಾನು ಮುಂಬಯಿ ಬಂದರವನ್ನು ಬಿಟ್ಟೆನು.

# ಕೊನೆಗೆ ವಿಲಾಯತಿಯಲ್ಲಿ

ಯಾವ ಸುಖದುಃಖಗಳೂ ತಲೆದೋರದೆ ನನ್ನ ಪ್ರಯಾಣವು ಕೊನೆಗಂಡಿತು. ಜುನಾಗಡದ ತ್ರ್ಯಂಬಕ-ಲಾಲ ಮುಜುಮದಾರ ಮತ್ತು ನಾನು ಸೌದೆಂಪ್ಟನ್ ಬಂದರಕ್ಕೆ ಬಂದು ಮುಟ್ಟಿದೆವು.

ಸೌದೆಂಪ್ಟನ್‌ದಿಂದ ನಾನು ಡಾಕ್ಟರ ಪ್ರಾಣಜೀವನ ಮೇಹತಾ ಅವರಿಗೆ ತಂತಿ ಕಳಿಸಿದೆನು. ಅವರು ಬಂದರು. ಅವರು ಪ್ರೀತಿಯಿಂದ ನನಗೆ ಬಹಳ ನಗೆಚಾಟಿಕೆಯಾಡಿ-ದರು. ಅವರು ನಗುನಗುತ್ತಲೇ ವಿಲಾಯತಿಯ ಬಗ್ಗೆ ಅನೇಕ ಸಂಗತಿಗಳನ್ನು ನನಗೆ ತಿಳಿಸಿದರು. "ವಿಲಾಯತಿ ಯಲ್ಲಿ ಬೇರೆಯವರ ಒಡವೆಗಳನ್ನು ಮುಟ್ಟದಿರು. ಪರಿಚಯ ವಾದನಂತರ ಹಿಂದುಸ್ಥಾನದಲ್ಲಿ ಸಹಜವಾಗಿ ಕೇಳಬಹು-ದಾದಂಥ ಮಾತುಗಳನ್ನು ಇಲ್ಲಿ ಕೇಳಬಾರದು. ದೊಡ್ಡ ದೊಡ್ಡ ಮಾತುಗಳನ್ನಾಡಬಾರದು. ಹಿಂದುಸ್ಥಾನದಲ್ಲಿ ಇಂಗ್ಲಿಷರ ಹತ್ತರ ಮಾತನಾಡುವಾಗ ಉಪಯೋಗಿಸುವ 'ಸರ್' ಶಬ್ದವು ಇಲ್ಲಿ ಅನಾವಶ್ಯಕವಾದುದು. ಇಲ್ಲಿ ಸೇವಕನು ಮಾತ್ರ ಒಡೆಯನನ್ನು ಇಲ್ಲವೆ ಹಿರಿಯ ಅಧಿ-ಕಾರಿಯನ್ನು ಉದ್ದೇಶಿಸಿ 'ಸರ್' ಎನ್ನುವುದುಂಟು."

## ನನ್ನ ಅಭಿರುಚಿ

ನನ್ನ ಊಟದ ಸಮಸ್ಯೆಯು ಬಹಳ ಬಿಕ್ಕಟ್ಟಿನ-ದಾಯಿತು. ಉಪ್ಪು-ಖಾರವಿಲ್ಲದ ಹುಳಿ ಸಾರು ನನಗೆ ಸೇರುತ್ತಿರಲಿಲ್ಲ. ಬಡ ಯಜಮಾನಿಯು ನನಗಾಗಿ ಬೇಯಿಸುವುದಾದರೂ ಏನು? ಬೆಳಿಗ್ಗೆ ತಯಾರಿಸುತ್ತಿದ್ದ ಓಟಧಾನ್ಯದ ಅಂಬಲಿಯಿಂದೇನೊ ಹೊಟ್ಟೆ ತುಂಬು-ತ್ತಿತ್ತು. ಆದರೆ ಮಧ್ಯಾಹ್ನದ ಹಾಗು ರಾತ್ರಿಯ ಊಟ ವನ್ನು ಅರೆಹೊಟ್ಟೆ ಉಂಡು ಏಳಬೇಕಾಗುತ್ತಿತ್ತು. ಹಸಿವೆ ಹಿಂಗುತ್ತಿರಲಿಲ್ಲ. ಗೆಳೆಯರು ಮಾಂಸಾಹಾರದ ಬಗ್ಗೆ ಆಗ್ರಹ ಮಾಡುತ್ತಲೇ ಇದ್ದರು. ಆದರೆ ನಾನೆಂದೂ ನನ್ನ ನಿರ್ಧಾರದಿಂದ ಹಿಂಜರಿಯಲಿಲ್ಲ. ಮೂವತ್ತಾರು ರೋಗಗಳ ಮೇಲೆ ಒಂದೇ ಔಷಧವಾದ 'ನ' ಕಾರವೇ ನನ್ನ ಹತ್ತಿರವಿತ್ತು. ಮಿತ್ರರು ತಿಳಿವಳಿಕೆ ಕೊಡುತ್ತ ಹೋದಹಾಗೆಲ್ಲ ನನ್ನ ನಿಶ್ಚಯವು ದೃಢವಾಗುತ್ತ ಹೋಗು-ತ್ತಿತ್ತು. ನನ್ನನ್ನು ಕಾಪಾಡಬೇಕೆಂದು ದಿನಾಲು ದೇವರಲ್ಲಿ ಪ್ರಾರ್ಥಿಸುತ್ತಿದ್ದೆನು; ನನ್ನ ಯಾಚನೆಯೂ ಫಲಿಸುತ್ತಿತ್ತು.

ಆಗ ದೇವರೆಂದರೇನು ಎಂಬುದು ನನಗೆ ತಿಳಿಯು-ತ್ತಿದ್ದಿಲ್ಲ. ಆದರೆ ನಮ್ಮ ದಾಯಿಯಾದ ರಂಭೆಯು ಹುಟ್ಟಿಸಿದ ಶ್ರದ್ಧೆಯು ತನ್ನ ಕೆಲಸವನ್ನು ಮಾಡುತ್ತಿತ್ತು.

ಈಗ ಡಾ|| ಮೆಹತಾ ಮತ್ತು ಬಂಧು ದಲಪತರಾಮ ಶುಕ್ಲ ಅವರು ಯಾವುದಾದರೊಂದು ಕುಟುಂಬದಲ್ಲಿ ನನ್ನನ್ನು ಇರಿಸಬೇಕೆಂದು ವಿಚಾರ ಮಾಡಿದರು. ಬಂಧು ಶುಕ್ಲನು ವೇಸ್ಟಕೇನ್ಸಿಂಗ್ಟನ್‌ದಲ್ಲಿ ಒಬ್ಬ ಆ್ಯಂಗ್ಲೋ-ಇಂಡಿಯನನ ಮನೆಯನ್ನು ಹುಡುಕಿದನು; ಅಲ್ಲಿಯೇ ನಾನು ತಳವೂರಿದೆನು.

ಇನ್ನೂ ಅಭ್ಯಾಸಕ್ಕೆ ಪ್ರಾರಂಭವಾಗಿರಲಿಲ್ಲ. ಶುಕ್ಲರ ಹೇಳಿಕೆಯ ಮೇರೆಗೆ ವರ್ತಮಾನಪತ್ರಗಳನ್ನು ಓದು-ತ್ತಿದ್ದೆನು.

ನಾನು ಅಡ್ಡಾಡಲಿಕ್ಕೆ ಹೋಗಲಿಕ್ಕೆ ಪ್ರಾರಂಭಿಸಿದೆನು. ನಾನು ಶಾಕಾಹಾರಿ ಊಟವನ್ನು ಒದಗಿಸುವ ಭೋಜನಾಲಯದ ಶೋಧನೆಯಲ್ಲಿದ್ದೆನು. ಇದಕ್ಕಾಗಿ ದಿನಾಲೂ ೧೦-೧೨ ಮೈಲುಗಳಷ್ಟು ತಿರುಗಾಡುತ್ತಿದ್ದೆನು. ಹೀಗೆ ಅಲೆದಾಡುತ್ತಿರುವಲ್ಲಿ ಒಂದು ದಿನ ನಾನು ಫೇರಿಂಗ್ಡನ್ ಬೀದಿಗೆ ಬಂದು ಮುಟ್ಟಿದೆನು; ಅಲ್ಲಿ ಶಾಕಾಹಾರಿ ಭೋಜನಾಲಯದ ಹೆಸರನ್ನು ಓದಿದೆನು. ಹರ್ಷಭರಿತನಾಗಿ ಒಳಗೆ ಹೋಗುವಷ್ಟರಲ್ಲಿ ಬಾಗಿಲಿನ ಹತ್ತಿರ ಕಾಜಿನ ಕಿಡಕಿಯಲ್ಲಿ ಮಾರಾಟಕ್ಕಾಗಿ ಇಟ್ಟ

ಪುಸ್ತಕಗಳನ್ನು ನೋಡಿದೆನು. ಅವುಗಳಲ್ಲಿ ಸಾಲ್ಟ ಅವರು ಬರೆದ "ಶಾಕಾಹಾರದ ಸಮರ್ಥನೆ" ಎಂಬ ಪುಸ್ತಕದ ಮೇಲೆ ನನ್ನ ದೃಷ್ಟಿಯು ಹರಿಯಿತು. ಅದನ್ನು ಒಂದು ಶಿಲಿಂಗಿಗೆ ಕೊಂಡುಕೊಂಡು ಊಟಮಾಡಲು ಕುಳಿತು-ಕೊಂಡೆನು. ವಿಲಾಯತಿಗೆ ಬಂದಮೇಲೆ ನಾನು ಹೊಟ್ಟೆ-ತುಂಬ ಊಟ ಮಾಡಿದುದು ಇದೇ ಮೊದಲನೆಯ ಸಲ. ದೇವರು ನನ್ನ ಹಸಿವೆಯನ್ನು ಹಿಂಗಿಸಿದನು. ನಾನು ಸಾಲ್ಟನ ಪುಸ್ತಕವನ್ನು ಓದಿದೆನು. ನನ್ನ ಮನಸ್ಸಿನ ಮೇಲೆ ಒಳ್ಳೆಯ ಪರಿಣಾಮವಾಯಿತು. ಈಗ ನಾನು ಸ್ವಯಂಪ್ರೇರಣೆಯಿಂದ ಮನಃಪೂರ್ವಕವಾಗಿ ಶಾಕಾ-ಹಾರದ ಸಮರ್ಥಕನಾದೆನು. ನಾನು ಸ್ವತಃ ಶಾಕಾಹಾರಿ-ಯಾಗುವದಲ್ಲದೆ, ಇತರರನ್ನೂ ಹಾಗೆ ಪರಿವರ್ತಿಸ-ಬೇಕೆಂಬುದೇ ನನ್ನ ಕರ್ತವ್ಯವೆಂದು ಬಗೆದೆನು.

## 'ಸಭ್ಯ' ವೇಷದ!

ಸಾಲ್ಟನ ಪುಸ್ತಕದಿಂದ ಆಹಾರದ ವಿಷಯದಲ್ಲಿ ಹೆಚ್ಚೆಚ್ಚು ಪುಸ್ತಕಗಳನ್ನು ಓದುವ ನನ್ನ ಉತ್ಸುಕತೆಯು ತೀವ್ರವಾಯಿತು. ಇಂತಹ ಪುಸ್ತಕಗಳಲ್ಲಿ ಸಿಕ್ಕಿದುವುಗಳಷ್ಟನ್ನೂ ಕೊಂಡುಕೊಂಡು ಓದಿದೆನು. ಇವುಗಳಲ್ಲಿ ಹಾವರ್ಡ ವಿಲಿಯಮ್ಸ ಅವರ 'ಆಹಾರ ನೀತಿ' ಮತ್ತು ಡಾ|| ಎನಾ ಕಿಂಗ್ಸಫರ್ಡ ಅವರ 'ಆಹಾರದ ಉತ್ತಮ ರೀತಿ' ಇವೂ ಇದ್ದವು. ಅಲ್ಲದೆ ಡಾ|| ಎಲಿನ್ಸನ್ ಅವರ ಆರೋಗ್ಯ ವಿಷಯಕವಾದ ಲೇಖನಗಳೂ ಬಹಳ ಸಹಾಯಕವಾದುವು. ಇವುಗಳಲ್ಲಿ ಔಷಧವನ್ನು ಕೊಡು-ವುದರ ಬದಲು ಆಹಾರದಲ್ಲಿ ಬದಲಾವಣೆಗಳನ್ನು ಮಾಡಿ ರೋಗಿಗಳನ್ನು ಗುಣಪಡಿಸುವ ವಿಧಾನದ ಸಮರ್ಥನೆ-ಯಿದೆ. ಈ ಪುಸ್ತಕಗಳನ್ನು ಓದುವುದರಿಂದಾಗಿ ನನ್ನ ಜೀವನದಲ್ಲಿ ಆಹಾರದ ಪ್ರಯೋಗಗಳಿಗೆ ಮಹತ್ವದ ಸ್ಥಾನವು ಸಿಕ್ಕಿತು. ಮೊದಮೊದಲು ಅವುಗಳಲ್ಲಿ ಆರೋಗ್ಯದೃಷ್ಟಿಗೇ ಪ್ರಾಧಾನ್ಯವಿತ್ತು; ಬರಬರುತ್ತ ಧಾರ್ಮಿಕದೃಷ್ಟಿಯು ಎಲ್ಲವನ್ನೂ ಆವರಿಸಿತು.

ನಾನು 'ಕಾಡುಮನುಷ್ಯ' ನಾಗಿ ಇರಬಾರದೆಂದು ನಿಶ್ಚಯಿಸಿದೆನು. ಸಭ್ಯಗೃಹಸ್ಥರ ಲಕ್ಷಣಗಳನ್ನು ಅಳವಡಿಸಿಕೊಂಡು ಬೇರೆ ಉಪಾಯಗಳಿಂದ ಸಮಾಜದಲ್ಲಿ ವ್ಯವಹರಿಸಲು ಯೋಗ್ಯನಾಗಿ ಅನ್ನಾಹಾರದ ಬಗೆಗೆ ಕಾಣುವ ನನ್ನ ವೈಚಿತ್ರ್ಯವನ್ನು ಮರೆಸಬೇಕೆಂದು ನಿರ್ಧರಿಸಿದೆನು.

ನಾನು ಸಭ್ಯಗೃಹಸ್ಥರ ಲಕ್ಷಣವನ್ನು ಕಲಿಯುವ ಹಾದಿಯನ್ನೇನೋ ರೂಪಿಸಿಯಾಯಿತು. ಆದರೆ ಅದು ನನಗೆ ನಿಲುಕದಂತಹದೂ ಬಹಳ ಇಕ್ಕಟ್ಟಿನದೂ ಆಗಿತ್ತು. 'ಆರ್ಮಿ ಮತ್ತು ನೇವಿ ಸ್ಟೋರ್' ನಲ್ಲಿ ಉಡುಪುಗಳನ್ನು ಮಾಡಿಸಿಕೊಂಡೆನು. ಬಾಂಡ ಸ್ಟ್ರೀಟನಲ್ಲಿ ಷೋಕಿ ಜನರ ಬಟ್ಟೆಗಳು ಹೊಲಿಯಲ್ಪಡುತ್ತಿದ್ದುವು; ಅಲ್ಲಿ ಸಂಧ್ಯಾಕಾಲದ ಉಡುಪೊಂದನ್ನು ಹೊಲಿಸಿದೆನು. ನನ್ನ ಭೋಳೆ ಅಣ್ಣನ ಕಡೆಯಿಂದ ಎರಡೂ ಜೇಬುಗಳಲ್ಲಿ ತೂಗಬಿಡಲು ಆಗುವಂತಹ ಬಂಗಾರದ ಸರಪಳಿಯನ್ನೂ ತರಿಸಿದೆನು. ಟಾಯ್ ಕಟ್ಟುವ ಕಲೆಯನ್ನೂ ಕಲಿತುಕೊಂಡೆನು. ಸ್ವದೇಶದಲ್ಲಿದ್ದಾಗ ಕೂದಲು ಕತ್ತರಿಸುವ ಸಮಯದಲ್ಲಿ ಮಾತ್ರ ನಾನು ಕನ್ನಡಿಯಲ್ಲಿ ನೋಡುತ್ತಿದ್ದೆನು. ಇಲ್ಲಿಯಂತೂ ನಿಲುಗನ್ನಡಿಯ ಮುಂದೆ ನಿಂತು ಟಾಯ್ ಕಟ್ಟುವುದರಲ್ಲಿ, ಕೂದಲು ಬಾಚಿಕೊಳ್ಳುವುದರಲ್ಲಿ ೧೦ ನಿಮಿಷಗಳು ಕಳೆದು ಹೋಗುತ್ತಿದ್ದುವು.

ಆದರೆ ಇಷ್ಟು ವೈಯಾರವು ಸಾಕೆನಿಸಲಿಲ್ಲ. 'ಸಭ್ಯ-ಗೃಹಸ್ಥ'ನೆನಿಸಿಕೊಳ್ಳುವವನಿಗೆ ನೃತ್ಯ ಕಲೆಯ ಅರಿವು ಇರಬೇಕು; ಫ್ರೆಂಚ ಭಾಷೆಯ ಜ್ಞಾನವೂ ಉತ್ತಮ-ವಾಗಿರಬೇಕು; ಇಂಪಾದ ವ್ಯಾಖ್ಯಾನಗಳನ್ನು ಕೊಡು-ವುದರಲ್ಲಿಯೂ ಅವನು ನಿಪುಣನಾಗಿರಬೇಕು. ಅಂತೆಯೇ ನಾನು ನೃತ್ಯದ ವರ್ಗವನ್ನು ಸೇರಿದೆನು. ಇದಕ್ಕೆ ಸುಮಾರು ಮೂರು ಪೌಂಡು ಕೊಟ್ಟಿರಬೇಕು. ವಾಯೋಲಿನ ಬಾರಿಸಲು ಕಲಿತರೆ ತಾಲ ಸ್ವರಗಳ ಜ್ಞಾನವಾಗುವದೆಂದು ಬಗೆದು ಮೂರು ಪೌಂಡು ಕೊಟ್ಟು ವಾಯೋಲಿನ ಕೊಂಡುಕೊಂಡೆನು. ಅದನ್ನು ಕಲಿಯುವುದಕ್ಕಾಗಿ ಫೀ ಹಣವನ್ನು ಕೊಟ್ಟೆನು. ವ್ಯಾಖ್ಯಾನ ಕಲೆಯನ್ನು ಹಸ್ತಗತ ಮಾಡಲಿಕ್ಕೆ ಮತ್ತೊಬ್ಬ ಶಿಕ್ಷಕನ ಮನೆಯನ್ನು ಹುಡುಕಿ ತೆಗೆದೆನು. ಬೇಲ್ಲ್‌ನ 'ಸ್ಟ್ಯಾಂಡರ್ಡ ಇಲೊ-ಕ್ಯೂಷನಿಸ್ಟ' ಎಂಬ ಪುಸ್ತಕವನ್ನು ಕೊಂಡೆನು.

ಈ ಬೇಲ್ ಸಾಹೇಬನು ನನ್ನ ಕಿವಿಯಲ್ಲಿ 'ಬೇಲ್' (ಗಂಟೆ) ಬಾರಿಸಿದನು; ನಾನು ಎಚ್ಚತ್ತೆನು ! ನನ್ನ ಇಡೀ ಆಯುಷ್ಯವನ್ನೇನೂ ನಾನು ಇಂಗ್ಲಂಡಿನಲ್ಲಿ ಕಳೆಯುವು-ದಿರಲಿಲ್ಲ. ವ್ಯಾಖ್ಯಾನ ಕೊಡುವುದನ್ನು ಕಲಿತು ನಾನು ಏನು ಮಾಡುವುದಿತ್ತು ? ಕುಣಿತವನ್ನು ಕಲಿತು ನಾನು 'ಸಭ್ಯ-ಗೃಹಸ್ಥ'ನಾಗುವ ಬಗೆ ಹೇಗೆ? ವಾಯೋಲಿನ್ ಅಂತೂ ಸ್ವದೇಶದಲ್ಲಿಯೇ ಕಲಿಯಬಹುದು. ನಾನು ವಿದ್ಯಾರ್ಥಿ

ಯಾಗಿದ್ದೇನೆ. ನಾನು ವಿದ್ಯಾಧನವನ್ನು ವರ್ಧಿಸಿಕೊಳ್ಳ ಬೇಕಾಗಿದೆ. ನನ್ನ ಸದಾಚಾರಗಳಿಂದ ನಾನು 'ಸಭ್ಯ-ಗೃಹಸ್ಥ' ನೆನ್ನಿಸಿಕೊಳ್ಳುವುದು ಸಾಧ್ಯವಾದರೆ ಒಳಿತು, ಇಲ್ಲದಿದ್ದರೆ ನಾನು ಈ ಮೋಹವನ್ನು ಬಿಟ್ಟುಬಿಡಬೇಕು.

ನಾನು ವ್ಯಾಖ್ಯಾನ, ಕುಣಿತ, ವಾಯೋಲಿನ್ ಕಲಿ-ಯುವದನ್ನು ಬಿಟ್ಟುಬಿಟ್ಟೆನು. ವಾಯೋಲಿನ್ ಮಾರಿ-ಬಿಟ್ಟೆನು. 'ಸಭ್ಯಗೃಹಸ್ಥ' ನಾಗುವ ನನ್ನ ಈ ಹುಚ್ಚು ಸುಮಾರು ಮೂರು ತಿಂಗಳುಗಳಷ್ಟು ಕಾಲ ನಡೆದಿರ-ಬಹುದು. ಆದರೆ ಉಡುಪುಗಳ ವೈಯಾರವು ಮಾತ್ರ ಅನೇಕ ವರ್ಷಗಳ ವರೆಗೆ ನಡೆಯಿತು. ಆದರೂ ನಾನು ಇಷ್ಟರಲ್ಲಿ ನಿಜವಾದ ವಿದ್ಯಾರ್ಥಿಯಾಗಿದ್ದೆನು.

## ಪರಿವರ್ತನೆ

ಈ ಸಮ್ಮೋಹನಾವಸ್ಥೆಯಲ್ಲಿಯೂ ನಾನು ಕೆಲ-ಮಟ್ಟಿಗೆ ಜಾಗರೂಕನಾಗಿಯೇ ಇದ್ದೆನು. ಪ್ರತಿಯೊಂದು ಕಾಸಿನ ಲೆಕ್ಕವನ್ನೂ ಇಡುತ್ತಿದ್ದೆನು. ತಿಳಿವಳಿಕೆಯಿಂದ ವೆಚ್ಚ ಮಾಡುತ್ತಿದ್ದೆನು. ಪ್ರತಿತಿಂಗಳಿಗೂ ೧೫ ಪೌಂಡು ಗಳಕಿಂತ ಹೆಚ್ಚು ಖರ್ಚು ಮಾಡಬಾರದೆಂದು ನಿರ್ಧರಿ-ಸಿದೆನು. ಬಸ್ ಬಾಡಿಗೆ ಅಂಚೆವೆಚ್ಚವನ್ನು ಸಹ ಬರೆ-ದಿಡುತ್ತಿದ್ದೆನು; ಅಲ್ಲದೆ, ರಾತ್ರಿ ಮಲಗುವ ಪೂರ್ವದಲ್ಲಿ ಲೆಕ್ಕದ ಮೇಳ ನೋಡುತ್ತಿದ್ದೆನು. ಈ ರೂಢಿಯು ಕೊನೆಯ ವರೆಗೂ ಉಳಿಯಿತು. ಇದರಿಂದಾಗಿ ಸಾರ್ವ-ಜನಿಕ ಕಾರ್ಯಗಳಲ್ಲಿ ನನ್ನ ಮುಖಾಂತರ ವೆಚ್ಚವಾದ ಲಕ್ಷಾವಧಿ ರೂಪಾಯಿಗಳನ್ನು ಮಿತವ್ಯಯದಿಂದ ಖರ್ಚು ಮಾಡುವುದು ಸಾಧ್ಯವಾಯಿತು. ಅಲ್ಲದೆ ನನ್ನ ಮೇಲ್ವಿ-ಚಾರಣೆಯಲ್ಲಿ ನಡೆದ ಕೆಲಸಗಳ ಬಗ್ಗೆ ಸಾಲ ಮಾಡುವ ಪ್ರಸಂಗ ನನಗೆ ಬರಲಿಲ್ಲ.

ಈಗ ನಾನು ವೆಚ್ಚವನ್ನು ಅರ್ಧಕ್ಕಿಳಿಸಬೇಕೆಂದು ವಿಚಾರ ಮಾಡಿದೆನು. ಲೆಕ್ಕವನ್ನು ನೋಡಲಾಗಿ ಗಾಡಿ

ಬಾಡಿಗೆಯ ಖರ್ಚು ಸಾಕಷ್ಟು ಆಗುತ್ತಿತ್ತೆಂದು ಕಂಡು ಬಂದಿತು. ಮೇಲಾಗಿ ಬೇರೆಯವರ ಮನೆಯಲ್ಲಿದ್ದುದ-ರಿಂದ ಪ್ರತಿ ವಾರವೂ ಒಂದಿಲ್ಲೊಂದು ರೀತಿಯಿಂದ ವೆಚ್ಚ ಮಾಡುವ ಪ್ರಸಂಗವು ನನಗೆ ಬರುತ್ತಿತ್ತು. ಆದುದರಿಂದ ಪ್ರತ್ಯೇಕವಾದ ಕೋಣೆಯನ್ನು ಹಿಡಿಯ ಬೇಕೆಂದು ನಿಶ್ಚಯಿಸಿದೆನು. ನನ್ನ ಕೆಲಸದ ಸ್ಥಳಕ್ಕೆ ಅರ್ಧ ತಾಸಿನಲ್ಲಿ ನಡೆದು ಹೋಗಲು ಅನುಕೂಲವಾಗು-ವಂತಹ ಮನೆಯನ್ನೇ ಹಿಡಿದೆನು. ಇದರಿಂದ ಗಾಡಿಯ ಬಾಡಿಗೆಯನ್ನು ತೆರುವುದು ತಪ್ಪಿತು; ತಿರುಗಾಡಲಿಕ್ಕೆ ವ್ಯಯಿಸಬೇಕಾದ ಸಮಯವೂ ಉಳಿಯಿತು; ಕೆಲಸದ ಸ್ಥಳಕ್ಕೆ ನಡೆದು ಹೋಗುವುದರಿಂದ ತಿರುಗಾಟವೂ ಆದಂತಾಯಿತು. ಈ ತೆರದಲ್ಲಿ ದಿನವೂ ೮–೧೦ ಮೈಲು ತಿರುಗಾಟವು ಸಹಜವಾಗಿ ಆಗುತ್ತಿತ್ತು. ಮುಖ್ಯವಾಗಿ ಇದೊಂದೇ ಕಾರಣದಿಂದ ವಿಲಾಯತಿಯಲ್ಲಿ ಇದ್ದಷ್ಟು ಕಾಲ ನಾನು ಬಹುಶಃ ಕಾಹಿಲೆ ಬೀಳುವ ಪ್ರಸಂಗವು ಬರಲಿಲ್ಲ; ಮೈಕಟ್ಟು ಸುದೃಢವಾಯಿತು.

ಬ್ಯಾರಿಸ್ಟರ ಪರೀಕ್ಷೆಗೆ ಬಹಳಷ್ಟು ಅಭ್ಯಾಸ ಮಾಡುವ ಅವಶ್ಯಕತೆ ಇರಲಿಲ್ಲವೆಂದು ನನಗೆ ಗೊತ್ತಿತ್ತು. ಆದುದರಿಂದ ನಾನು ನಿಶ್ಚಿಂತನಾಗಿದ್ದೆನು. ನನ್ನ ಅಪಕ್ವ ವಾದ ಇಂಗ್ಲಿಷ್ ಭಾಷೆಯ ಬಗ್ಗೆ ನನಗೆ ಕೆಡಕೆನಿಸುತ್ತಿತ್ತು. ಒಬ್ಬ ಗೆಳೆಯರು ಹೀಗೆ ಸೂಚಿಸಿದರು: “ಲಂಡನಿನ

ಪ್ರವೇಶ ಪರೀಕ್ಷೆಯಲ್ಲಿ ಉತ್ತೀರ್ಣನಾಗಲು ಪ್ರಯತ್ನ ಪಡುವದಕ್ಕಾಗಿ ನೀನು ಸಾಕಷ್ಟು ಪರಿಶ್ರಮ ಮಾಡಬೇಕಾಗುವುದು; ನಿನ್ನ ಸಾಮಾನ್ಯ ಜ್ಞಾನವೂ ಹೆಚ್ಚುವುದು." ಈ ಸೂಚನೆಯು ನನಗೆ ಸಮ್ಮತವಾಯಿತು. ಆದರೆ ಪರೀಕ್ಷೆಯ ವಿಷಯ ಪಟ್ಟಿಯನ್ನು ನೋಡಿ ನನಗೆ ಗಾಬರಿಯಾಯಿತು. ಲ್ಯಾಟಿನ್ ಹಾಗು ಇನ್ನೊಂದು ಭಾಷೆ— ಇವು ಅನಿವಾರ್ಯವಾಗಿದ್ದವು. ಲ್ಯಾಟಿನ್ ಅವಶ್ಯವಾಗಿ ಕಲಿಯಬೇಕು. ನಾನು ಈ ಮೊದಲೇ ಪ್ರಾರಂಭಿಸಿದ ಫ್ರೆಂಚ ಭಾಷೆಯ ಅಭ್ಯಾಸವನ್ನೂ ಮುಗಿಸಬೇಕಾಗಿತ್ತು; ಆದುದರಿಂದ ಫ್ರೆಂಚ ಭಾಷೆಯನ್ನು ಎರಡನೆಯ ಭಾಷೆಯನ್ನಾಗಿ ತೆಗೆದುಕೊಳ್ಳಬೇಕೆಂದು ಗೊತ್ತು ಮಾಡಿದೆನು.

ನನ್ನ ಮನೆತನದ ಬಡತನಕ್ಕೆ ಶೋಭಿಸುವಂತಹ ಸರಳತನವು ನನ್ನ ಜೀವನದಲ್ಲಿ ಇನ್ನೂ ಬರಲಿಲ್ಲವೆಂಬ ವಿಚಾರವು ನನ್ನನ್ನು ಕಾಡುತ್ತಿತ್ತು. ನನಗಿಂತಲೂ ಮಿಗಿಲಾಗಿ ಸರಳ ಜೀವನವನ್ನು ನಡೆಸುತ್ತಿದ್ದವರನ್ನೂ ನಾನು ನೋಡುತ್ತಿದ್ದೆನು. ಒಬ್ಬ ವಿದ್ಯಾರ್ಥಿಯು ಲಂಡನ್ನಿನ ಬಡವರ ಕೇರಿಯಲ್ಲಿ ವಾರಕ್ಕೆ ೨ ಶಿಲಿಂಗುಗಳನ್ನು ಕೊಟ್ಟು ಒಂದು ಕೋಣೆಯಲ್ಲಿರುತ್ತಿದ್ದು, ೨ ಪೇನ್ಸುಗಳಲ್ಲಿ ಕೋಕೊ ಹಾಗೂ ರೊಟ್ಟಿಯನ್ನು ತಿಂದು ಜೀವಿಸುತ್ತಿದ್ದನು. ನನ್ನಿಂದ ಹೀಗೆ ಇರಲು

ಆಗುತ್ತಿದ್ದಿಲ್ಲ. ಆದರೆ ೨ ಕೋಣೆಗಳ ಬದಲು ಒಂದ-ರಿಂದಲೇ ಕೆಲಸವಾಗುವಂತಿದೆಯೆಂದೂ ಅರ್ಧ ಅಡುಗೆ-ಯನ್ನು ನಾನೇ ಮಾಡಿಕೊಳ್ಳುವುದು ಸಾಧ್ಯವಿದೆಯೆಂದೂ ನನಗೆ ತೋರಿತು. ಈ ವ್ಯವಸ್ಥೆಯಿಂದ ತಿಂಗಳಿಗೆ ೪-೫ ಪೌಂಡುಗಳಲ್ಲಿ ನನ್ನ ಕಾರ್ಯವಾಗುವಂತಿತ್ತು. ವಾರಕ್ಕೆ ೮ ಶಿಲಿಂಗುಗಳನ್ನು ಕೊಡುವುದನ್ನು ಗೊತ್ತು ಮಾಡಿ ಒಂದು ಕೋಣೆಯನ್ನು ಹಿಡಿದೆನು. ಗ್ಯಾಸಿನ ಒಲೆ-ಯನ್ನು ಕೊಂಡುಕೊಂಡು ಮುಂಜಾವದ ಅಡುಗೆಯನ್ನು ಮನೆಯಲ್ಲಿಯೇ ಮಾಡುವುದನ್ನು ಪ್ರಾರಂಭಿಸಿದೆನು. ಅಡುಗೆಗೆ ೨೦ ನಿಮಿಷಗಳಿಗಿಂತಲೂ ಹೆಚ್ಚು ಸಮಯ ಹಿಡಿಯುತ್ತಿರಲಿಲ್ಲ. ಅಂಬಲಿಯನ್ನು ತಯಾರಿಸಲು ಮತ್ತು ಕೋಕೋ ಬಗ್ಗೆ ನೀರನ್ನು ಕುದಿಸಲು ಎಷ್ಟು ಸಮಯ ಹಿಡಿದೀತು? ಮಧ್ಯಾಹ್ನದ ಭೋಜನವನ್ನು ಹೊರಗೆ ಮಾಡುತ್ತಿದ್ದೆನು. ಹಾಗೂ ರಾತ್ರಿ ಕೋಕೋ ಮತ್ತು ರೊಟ್ಟಿಯನ್ನು ಮಾಡಿಕೊಳ್ಳುತ್ತಿದ್ದೆನು. ಹೀಗೆ ದಿನಾಲು ೧-೧½ ಶಿಲಿಂಗುಗಳಲ್ಲಿ ನನ್ನ ಊಟವಾಗುತ್ತಿತ್ತು.

ಈ ರೀತಿ ಸರಳತನದಿಂದ ಇರುವುದರಿಂದ ನನ್ನ ಜೀವನವು ನೀರಸವಾಗಿತ್ತೆಂದು ಓದುಗರು ತಿಳಿಯ ಬಾರದು. ಇದಕ್ಕೆ ವಿರುದ್ಧವಾಗಿ ನನ್ನ ಜೀವನವು ಇನ್ನಷ್ಟು ಸರಳವಾಯಿತು. ನನ್ನ ಆತ್ಮಾನಂದಕ್ಕೆ ಪಾರವೇ ಉಳಿಯಲಿಲ್ಲ!

## ಆಹಾರದ ಪ್ರಯೋಗಗಳು

ಶಾಕಾಹಾರಕ್ಕೆ ಸಂಬಂಧಿಸಿದ ಪುಸ್ತಕಗಳಲ್ಲಿ ಲೇಖಕರು ಒಳ್ಳೆಯ ಪರಿಶೋಧನೆಯಿಂದ ವಿಚಾರ ಮಾಡಿದುದು ನನಗೆ ಕಂಡು ಬಂದಿತು. ಮಾನವನಿಗೆ ಪಶುಪಕ್ಷಿಗಳ ಮೇಲಿನ ಅಧಿಕಾರವು ಪ್ರಾಪ್ತವಾದುದು ಅವುಗಳನ್ನು ಕೊಂದು ತಿನ್ನುವುದಕ್ಕಾಗಿರದೆ, ಅವು-ಗಳನ್ನು ಕಾಪಾಡಲಿಕ್ಕೆ ಎಂಬುದನ್ನು ಅವರು ನೈತಿಕ ದೃಷ್ಟಿಯಿಂದ ತೋರಿಸಿಕೊಟ್ಟಿರುವರು. ಮೇಲಾಗಿ ತಿನ್ನುವುದು ಬದುಕಿರುವುದಕ್ಕೆ ಹೊರತು ಭೋಗಕ್ಕಲ್ಲ. ಇದಕ್ಕಾಗಿ ಕೆಲವರಂತೂ ಮಾಂಸವನ್ನಷ್ಟೇ ಅಲ್ಲ; ತತ್ತಿ, ಹಾಲನ್ನೂ ತ್ಯಜಿಸಬೇಕೆಂದು ಸೂಚಿಸಿರುವರು. ವಿಜ್ಞಾನದ ಹಾಗು ಮನುಷ್ಯನ ಶರೀರ ರಚನೆಯ ದೃಷ್ಟಿಯಿಂದ ಮನುಷ್ಯನ ಆಹಾರವನ್ನು ಬೇಯಿಸುವ ಆವಶ್ಯಕತೆಯಿಲ್ಲವೆಂಬ ಅನುಮಾನವನ್ನೂ ಕೆಲವರು ಹೊರಡಿಸಿರುವರು. ಅವರ ದೃಷ್ಟಿಯಲ್ಲಿ ಬೇಳೆ, ಹಣ್ಣು ಗಳನ್ನಷ್ಟೇ ತಿನ್ನಬಹುದು; ಹಾಲನ್ನು ಕುಡಿಯುವುದೇ ಇದ್ದಲ್ಲಿ ತಾಯಿಯ ಹಾಲನ್ನು ಮಾತ್ರ ಕುಡಿಯಬಹುದು.

ಹಲ್ಲುಗಳು ಬಂದಮೇಲಂತೂ ಅಗಿದು ತಿನ್ನಲು ಆಗು-
ವಂತಹ ಆಹಾರವನ್ನೇ ಸೇವಿಸಬೇಕು. ವೈದ್ಯಕೀಯ
ದೃಷ್ಟಿಯಲ್ಲಿ ಮೆಣಸು–ಮಸಾಲೆಗಳು ತ್ಯಾಜ್ಯವೆಂದೂ
ಆರ್ಥಿಕ ದೃಷ್ಟಿಯಲ್ಲಿ ಅನ್ನವೇ ಅಗ್ಗವಾದ ಆಹಾರವೆಂದೂ
ಅವರು ಗೊತ್ತು ಮಾಡಿದರು. ಈ ನಾಲ್ಕೂ ದೃಷ್ಟಿ-
ಕೋನಗಳ ಪರಿಣಾಮವು ನನ್ನ ಮೇಲಾಯಿತು. ಶಾಕಾ-
ಹಾರದ ಭೋಜನಾಲಯಗಳಲ್ಲಿ ಈ ನಾಲ್ಕು ದೃಷ್ಟಿಯ
ಜನರೂ ನನಗೆ ಭೆಟ್ಟಿಯಾಗುತ್ತಿದ್ದರು. ವಿಲಾಯತಿಯಲ್ಲಿ
ಈ ವಿಚಾರದ ಜನರ ಒಂದು ಆ ಸಂಸ್ಥೆಯೂ ಇದ್ದಿತು.
ಅವರು ಒಂದು ಸಾಪ್ತಾಹಿಕವನ್ನೂ ನಡೆಸುತ್ತಿದ್ದರು.
ನಾನು ಅದಕ್ಕೆ ಚಂದಾದಾರನಾದೆನು; ಅವರ ಸಂಸ್ಥೆಯ
ಸದಸ್ಯನೂ ಆದೆನು. ನಾನು ಆಹಾರದ ಪ್ರಯೋಗ-
ಗಳನ್ನು ಮಾಡುವುದರಲ್ಲಿ ತೊಡಗಿದೆನು.

ಮನೆಯಿಂದ ಮಿಠಾಯಿ–ಮಸಾಲೆಗಳನ್ನು ತರಿಸುವು
ದನ್ನು ಬಿಟ್ಟುಬಿಟ್ಟೆನು. ಮನಸ್ಸಿನ ದಿಕ್ಕನ್ನು ಬದಲಿಸಿ
ದೆನು. ಇದರಿಂದಾಗಿ ಮಸಾಲೆಯ ಮೋಹವು ಕಡಮೆ
ಯಾಯಿತು. ಮೊದಲು ಅರುಚಿಕರವೆನ್ನಿಸುತ್ತಿದ್ದ
ಮಸಾಲೆ ಹಾಕದ ಕಾಯಿಪಲ್ಲೆಯು, ಈಗ ಕೇವಲ
ಬೇಯಿಸಿದರೂ ರುಚಿಕರವೆನ್ನಿಸತೊಡಗಿತು. ರುಚಿಯ
ನಿಜವಾದ ಉಗಮಸ್ಥಾನವು ನಾಲಗೆಯಾಗಿರದೆ ಮನಸ್ಸೇ
ಆಗಿದೆಯೆಂಬುದನ್ನು ನಾನು ಮನಗಂಡೆನು.

ಚಹಾ, ಕಾಫಿಗಳು ಹಾನಿಕರವಾಗಿವೆಯೆಂದು ಕೋಕೋವನ್ನು ಪುರಸ್ಕರಿಸುವ ಒಂದು ಪಂಗಡವು ಆ ಕಾಲದಲ್ಲಿದ್ದಿತು. ಶರೀರ ಯಾತ್ರೆಯನ್ನು ಸಾಗಿಸಲು ಬೇಕಾಗುವ ವಸ್ತುಗಳನ್ನಷ್ಟೇ ತಿನ್ನಬೇಕೆಂದು ನನ್ನ ಮನವರಿಕೆಯಾಗಿತ್ತು. ಇದಕ್ಕಾಗಿ ಮುಖ್ಯವಾಗಿ ಚಹಾ ಕಾಫಿಗಳನ್ನು ತೊರೆದು ಈ ಜನರು ಅವುಗಳ ಬದಲಾಗಿ ಕೋಕೋ ಕುಡಿಯುತ್ತಿದ್ದರು.

ಭೋಜನಾಲಯದಲ್ಲಿ ಎರಡು ವಿಭಾಗಗಳಿದ್ದವು. ಒಂದರಲ್ಲಿ ತಿಂದಷ್ಟು ಪದಾರ್ಥಗಳ ಬೆಲೆ ತೆರಬೇಕಾಗುತ್ತಿತ್ತು. ಇದರಲ್ಲಿ ಪ್ರತಿ ಸಲ ಒಂದೆರಡು ಶಿಲಿಂಗುಗಳಷ್ಟು ಖರ್ಚು ಬರುತ್ತಿತ್ತು. ಎರಡನೆಯ ವಿಭಾಗದಲ್ಲಿ ಆರು ಪೇನ್ಸುಗಳಲ್ಲಿ ಮೂರು ಜೀನಸುಗಳು ಹಾಗು ರೊಟ್ಟಿಯ ತುಂಡು ಸಿಗುತ್ತಿದ್ದವು. ನನಗೆ ಬಹಳ ಮಿತವ್ಯಯ-ವನ್ನು ಸಾಧಿಸಬೇಕೆಂದಾಗ ನಾನು ೬ ಪೇನ್ಸುಗಳ ವಿಭಾಗದಲ್ಲಿ ಊಟ ಮಾಡುತ್ತಿದ್ದೆನು.

ಹಾಲಿನ ಕೆನೆ, ಹಾಲು ಹಾಗೂ ತತ್ತಿಗಳನ್ನು ತೆಗೆದುಕೊಳ್ಳುವ ಪ್ರಯೋಗವು ಉಲ್ಲೇಖನೀಯ-ವಾಗಿದೆ. ಪಿಷ್ಟವಿಲ್ಲದ ಪದಾರ್ಥಗಳನ್ನು ತಿನ್ನಬೇಕೆಂದು ಸಮರ್ಥಿಸುವವರು, ತತ್ತಿಗಳನ್ನು ಬಹಳವಾಗಿ ಶ್ಲಾಘಿಸುತ್ತಿದ್ದರಲ್ಲದೆ, ಅವು ಮಾಂಸಾಹಾರವಲ್ಲವೆಂದು ಸಿದ್ಧ-ಮಾಡಿದರು. ತತ್ತಿಗಳನ್ನು ತಿನ್ನುವುದರಿಂದ ಯಾವ

ಜೀವಂತ ಪ್ರಾಣಿಯೂ ಕಷ್ಟಕ್ಕೀಡಾಗುವಂತಿರಲಿಲ್ಲ- ವೇನೋ ನಿಜ. ಈ ತರ್ಕಸರಣಿಯ ಸೆಳವಿಗೆ ಸಿಕ್ಕು, ತಾಯಿಯ ಮುಂದೆ ನಾನು ಅನ್ಯಥಾ ಪ್ರತಿಜ್ಞೆ ಮಾಡಿದ್ದರೂ ಕೂಡ ತತ್ತಿಗಳನ್ನು ತಿಂದೆನು. ನನ್ನ ಭ್ರಾಂತಿಯು ಸ್ವಲ್ಪ ಕಾಲ ಮಾತ್ರ ಬಾಳಿತು. ಪ್ರತಿಜ್ಞೆಗೆ ಹೊಸ ಅರ್ಥವನ್ನು ಹಚ್ಚುವ ಅಧಿಕಾರವು ನನಗಿರಲಿಲ್ಲ. ಪ್ರತಿಜ್ಞೆ ಮಾಡಿಸಿದವನಿಗೆ ಇಷ್ಟವಿದ್ದ ಅರ್ಥವೇ ಸರಿಯಾದುದು. ಹೀಗೆ ಪ್ರತಿಜ್ಞೆಯ ರಹಸ್ಯವು ನನಗೆ ಹೊಳೆದಾಕ್ಷಣ ನಾನು ತತ್ತಿಗಳನ್ನು ತಿನ್ನುವುದನ್ನು ಬಿಟ್ಟುಬಿಟ್ಟೆನು.

ಆದರೆ ಇದರಿಂದ ನನಗೆ ಕಷ್ಟವಾಯಿತು. ಏಕೆಂದರೆ ಶಾಕಾಹಾರದ ಭೋಜನಾಲಯದಲ್ಲಿಯೂ ಬಹಳಷ್ಟು ಪದಾರ್ಥಗಳಲ್ಲಿ ತತ್ತಿಯನ್ನು ಸೇರಿಸುತ್ತಿದ್ದರು. ಆದರೆ ಒಂದು ತರದ ರಗಳೆಯೂ ನನಗೆ ತಪ್ಪಿತು. ಏಕೆಂದರೆ ನಾನು ಕೆಲವು ಸಾದಾ ಜೀನಸುಗಳನ್ನಷ್ಟೇ ತೆಗೆದುಕೊಳ್ಳಬೇಕಾಯಿತು. ಮತ್ತೊಂದು ರೀತಿಯಿಂದ ವಿಚಾರ ಮಾಡಿದರೆ ನನ್ನ ಮನಸ್ಸಿಗೆ ಸ್ವಲ್ಪ ಆಘಾತ- ವಾಯಿತೆಂದೇ ಹೇಳಬೇಕು; ಏಕೆಂದರೆ ನಾಲಿಗೆಗೆ ಬಹಳ ರುಚಿಕರವೆನ್ನಿಸುವ ಅನೇಕ ಪದಾರ್ಥಗಳನ್ನು ಬಿಡಬೇಕಾಗಿ ಬಂದಿತು. ಆದರೆ ಈ ಆಘಾತವು ಕ್ಷಣಿಕ- ವಾದದ್ದಿತ್ತು. ಪ್ರತಿಜ್ಞಾಪಾಲನೆಯ ಸರಳ, ಸೂಕ್ಷ್ಮ

ಹಾಗೂ ಶಾಶ್ವತವಾದ ಸವಿಯು ಈ ಕ್ಷಣಿಕವಾದ ಆಸ್ವಾ-ದನೆಗಿಂತಲೂ ನನಗೆ ಹೆಚ್ಚು ಪ್ರಿಯವೆನ್ನಿಸತೊಡಗಿತು.

ಈ ಅಧ್ಯಾಯವನ್ನು ಮುಗಿಸುವ ಮೊದಲು ಪ್ರತಿಜ್ಞೆಯ ಅರ್ಥವನ್ನು ಕುರಿತು ಕೆಲವೊಂದು ಸಂಗತಿ-ಗಳನ್ನು ಹೇಳುವುದು ಅವಶ್ಯವಿದೆ. ನನ್ನ ಪ್ರತಿಜ್ಞೆಯು ತಾಯಿಯ ಕೂಡ ಮಾಡಿಕೊಂಡ ಒಂದು ಒಡಂಬಡಿಕೆ-ಯಾಗಿತ್ತು. ಜಗತ್ತಿನೊಳಗಿನ ಬಹುಶಃ ಯಾವತ್ತೂ ಜಗಳಗಳು ಒಪ್ಪಂದಗಳ ಅರ್ಥದ ಎಳೆದಾಟದಿಂದಲೇ ಸಂಭವಿಸುತ್ತವೆ. ಸ್ವಾರ್ಥವು ಎಲ್ಲರನ್ನೂ ಅಂಧರನ್ನಾಗಿ ಮಾಡುತ್ತದೆ. ಅರಸರಿಂದ ಹಿಡಿದು ಭಿಕ್ಷುಕರ ವರೆಗೆ ಎಲ್ಲರೂ ಒಡಂಬಡಿಕೆಯ ಅರ್ಥವನ್ನು ತಮ್ಮ ಮನಸ್ಸಿಗೆ ಬಂದಂತೆ ಮಾಡಿ, ತಮ್ಮನ್ನೂ ಜಗತ್ತನ್ನೂ ಈಶ್ವರ-ನನ್ನೂ ವಂಚಿಸುತ್ತಾರೆ. ಪ್ರತಿಪಕ್ಷಿಯು ನಮ್ಮ ಮಾತಿಗೆ ಹಚ್ಚಿದ ಅರ್ಥವೇ ಸರಿಯಾದುದು— ಇದುವೇ ಸುವರ್ಣ ನ್ಯಾಯ. ನಮ್ಮ ಮನಸ್ಸಿನೊಳಗಿನ ಅರ್ಥವು ತಪ್ಪಾ-ದುದೂ ಅಪೂರ್ಣವಾದುದೂ ಎಂದು ತಿಳಿಯಬೇಕು. ಎರಡು ಅರ್ಥಗಳಾಗುವ ಸಂಭವವಿದ್ದಲ್ಲಿ ಬಲಹೀನ ಪಕ್ಷಕ್ಕೆ ಸಮ್ಮತವಾದ ಅರ್ಥವೇ ಸರಿಯಾದುದೆಂದು ತಿಳಿಯುವುದೇ ಎರಡನೆಯ ಸುವರ್ಣ ನ್ಯಾಯವು. ಈ ಎರಡೂ ಸುವರ್ಣ ಮಾರ್ಗಗಳನ್ನು ಹಿಡಿಯದೆ ಇರು-ವುದೇ ಅಧರ್ಮಕ್ಕೆ ಕಾರಣವಾಗುತ್ತದೆ. ಅಸತ್ಯವೇ

ಇಂತಹ ಅನ್ಯಾಯಕ್ಕೆ ಮೂಲವು. ಸತ್ಯದ ಹಾದಿ ತುಳಿಯಬಯಸುವವನಿಗೆ ಈ ಸುವರ್ಣಮಾರ್ಗವು ಸಹಜವಾಗಿ ಸಿಗುತ್ತದೆ. ಅವನು ಶಾಸ್ತ್ರಗ್ರಂಥಗಳನ್ನು ತಿರುವಿಹಾಕುವ ಆವಶ್ಯಕತೆಯಿಲ್ಲ.

ವಿಲಾಯತಿಯಲ್ಲಿಯ ನನ್ನ ಪ್ರಯೋಗಗಳು ಆರ್ಥಿಕ ಹಾಗೂ ಆರೋಗ್ಯ ದೃಷ್ಟಿಯಿಂದ ನಡೆಯುತ್ತಿದ್ದವು. ಧಾರ್ಮಿಕ ದೃಷ್ಟಿಯಿಂದ ಕಡುತರವಾದ ಪ್ರಯೋಗಗಳು ನಡೆದುದು ದಕ್ಷಿಣ ಆಫ್ರಿಕೆಯಲ್ಲಿ. ಆದರೆ ಇದರ ಬೀಜಾರೋಪಣವೂ ವಿಲಾಯತಿಯಲ್ಲಿಯೇ ಆಯಿತು.

'ಹೊಸದಾಗಿ ಮುಸಲ್ಮಾನನಾದವನು ಕರೆಯನ್ನು ಅಬ್ಬರದಿಂದ ಕೊಡುತ್ತಾನೆ' ಎಂಬ ಗಾದೆಯ ಮಾತು ಪ್ರಸಿದ್ಧವಿದೆ. ಇದರಂತೆ ನಾನೂ ನಾನಿದ್ದ ಓಣಿಯಲ್ಲಿ ಒಂದು ಶಾಕಾಹಾರಿಗಳ ಸಂಘವನ್ನು ಸ್ಥಾಪಿಸಬೇಕೆಂದು ವಿಚಾರ ಮಾಡಿದೆನು. ಆ ಕೇರಿಯಲ್ಲಿರುತ್ತಿದ್ದ ಸರ್ ಎಡ್ವಿನ್ ಅರ್ನೋಲ್ಡ ಅವರು ಇದಕ್ಕೆ ಉಪಾಧ್ಯಕ್ಷ-ರಾದರು. ಡಾ|| ಓಲ್ಡ ಫೀಲ್ಡ ಅವರು ಅಧ್ಯಕ್ಷರಾದರು. ನಾನು ಕಾರ್ಯದರ್ಶಿಯಾದೆನು. ಇದರಿಂದಾಗಿ ಸಂಸ್ಥೆಗಳ ರಚನೆ ಹಾಗು ಅವುಗಳನ್ನು ನಡೆಸುವಲ್ಲಿ ಸ್ವಲ್ಪ ಅನುಭವವು ನನಗೆ ದೊರಕಿತು.

## ಲಜ್ಜೆ— ನನ್ನ ರಕ್ಷಾಕವಚ

ಶಾಕಾಹಾರ ಮಂಡಲದ ಸಮಿತಿಗೆ ನಾನೇನೋ ಚುನಾಯಿತನಾದೆನು. ಅದಕ್ಕೆ ನಾನು ಉಪಸ್ಥಿತನಿರುತ್ತಿದ್ದೆನಾದರೂ ಮಾತನಾಡಲು ಬಾಯಿ ತೆರೆಯುತ್ತಿರಲಿಲ್ಲ. ಬಹಳ ದಿನಗಳ ವರೆಗೆ ಹೀಗೆಯೇ ನಡೆಯಿತು. ಆದರೆ ಕಡೆಗೆ ಸಮಿತಿಯಲ್ಲಿ ಒಂದು ಗಂಭೀರ ವಿಷಯವು ತಲೆಯೆತ್ತಿತು. ಆದರಲ್ಲಿ ಭಾಗವಹಿಸದಿರುವುದೆಂದರೆ ಅನ್ಯಾಯಕ್ಕೆ ಆಸ್ಪದವಿತ್ತಂತೆ ಎಂದು ನನಗೆ ತೋರಿತು.

ಮಿ॥ ಹಿಲ್ಸ ಅವರು ಮಂಡಲದ ಅಧ್ಯಕ್ಷರಾಗಿದ್ದರು. ಅವರ ಸಮಿತಿಯಲ್ಲಿ ಡಾ॥ ಎಲಿನ್ಸನ್ ಅವರೂ ಇದ್ದರು. ಈ ಕಾಲದಲ್ಲಿ ಸಂತತಿ ನಿಯಮನಕ್ಕಾಗಿ ಕೃತ್ರಿಮ ಸಾಧನಗಳನ್ನು ಉಪಯೋಗಿಸಬೇಕೆಂಬ ಆಂದೋಲನವು ನಡೆದಿತ್ತು. ಡಾ॥ ಎಲಿನ್ಸನ್ನರು ಈ ಉಪಾಯಗಳ ಬೆಂಬಲಿಗರಾಗಿದ್ದರು. ಆದುದರಿಂದ ಇಂತಹ ಸಮಾಜ ವಿಘಾತಕ ವಿಚಾರಗಳುಳ್ಳವರು ಮಂಡಲದಲ್ಲಿರಕೂಡದೆಂದು ಮಿ॥ ಹಿಲ್ಸ ಅವರ ಅಭಿಪ್ರಾಯವಾಗಿತ್ತು. ಡಾ॥ ಎಲಿನ್ಸನ್‌ರ ಕೃತಕ ಉಪಾಯಗಳ ವಿಚಾರವು ನನಗೂ ಭಯಂಕರವೆನಿಸಿತು. ಈ ವಿಷಯದಲ್ಲಿ ಮಿ॥ ಹಿಲ್ಸರ ವಿರೋಧವು ಸರಿಯಾದ ನೀತಿಯೆಂದು ನನ್ನ

ಭಾವನೆ. ಆದರೆ ಶುದ್ಧ ನೀತಿಯನ್ನು ಒಪ್ಪಿಕೊಳ್ಳದ ಒಬ್ಬನನ್ನು ಶಾಕಾಹಾರ ಮಂಡಲದಿಂದ ಹೊರದೂಡು- ವುದು ಸರ್ವಥಾ ಅನ್ಯಾಯದ್ದು ಎಂದು ನನಗೆನಿಸಿತು. ಆದರೆ ನನಗೆ ಮಾತಾಡಲಾಗಲಿಲ್ಲ.

ನನ್ನ ಈ ಮುಖಹೇಡಿತನವು ವಿಲಾಯತಿಯಲ್ಲಿರುವ ವರೆಗೂ ಹಾಗೆಯೇ ಉಳಿಯಿತು.

ವಿಲಾಯತಿಯನ್ನು ಬೀಳ್ಕೊಡುವಾಗ ಸಾರ್ವಜನಿಕ ಭಾಷಣ ಕೊಡುವ ಕೊನೆಯ ಪ್ರಯತ್ನವನ್ನು ನಾನು ಮಾಡಬೇಕಾಗಿ ಬಂದಿತು. ಶಾಕಾಹಾರಿ ಗೆಳೆಯರನ್ನು ಭೋಜನಾಲಯದಲ್ಲಿ ನಾನು ಭೋಜನಕ್ಕೆಂದು ಆಹ್ವಾನಿ- ಸಿದೆನು. ಅಲ್ಲಿ ಭಾಷಣ ಮಾಡುವ ನನ್ನ ಸರತಿ ಬಂದಿತು. ನಾನು ಎದ್ದು ನಿಂತೆನು. ನಾನು ಬಹಳ ವಿಚಾರ ಮಾಡಿ ಮಾತನಾಡುವ ಸಿದ್ಧತೆಯನ್ನು ಮಾಡಿಕೊಂಡು ಹೋಗಿದ್ದೆನು. ಆದರೆ ಮೊದಲನೆಯ ವಾಕ್ಯದಿಂದ ಮುಂ- ದರಿಯಲು ಸಾಧ್ಯವಾಗಲಿಲ್ಲ. ವಿಚಾರ ಮಾಡಿದ್ದೆಲ್ಲವೂ ಮರೆತು ಹೋಯಿತು. ವಿನೋದಪೂರ್ಣ ಭಾಷಣ ಮಾಡ ಬೇಕೆಂದಿದ್ದ ನಾನೇ ಹಾಸ್ಯಕ್ಕೆ ಗುರಿಯಾದೆನು. "ಸಭ್ಯ ಗೃಹಸ್ಥರೇ, ತಾವು ನನ್ನ ಆಮಂತ್ರಣವನ್ನು ಸ್ವೀಕರಿಸಿದ್ದ- ಕ್ಕಾಗಿ ನಾನು ತಮ್ಮೆಲ್ಲರ ಆಭಾರಿಯಾಗಿದ್ದೇನೆ" ಎಂದಿಷ್ಟೇ ಹೇಳಿ ನಾನು ಕುಳಿತುಕೊಳ್ಳಬೇಕಾಯಿತು.

ಈ ಮುಖಹೇಡಿತನ ಅಥವಾ ನಾಚಿಕೆಯ ಸ್ವಭಾ- ವವು ದಕ್ಷಿಣ ಆಫ್ರಿಕೆಗೆ ಹೋದಮೇಲೆಯೇ ನನ್ನಿಂದ

ತೊಲಗಿತು. ಅದು ಸಂಪೂರ್ಣ ತೊಲಗಿದೆಯೆಂದು ಈ ಹೊತ್ತೂ ಹೇಳಲಾರೆನು.

ಆದರೆ ಈ ಅಂಜುಬುರುಕುತನದಿಂದ ನನ್ನ ಫಜೀತಿ ಮಾತ್ರ ಆಯಿತಲ್ಲದೆ ಇನ್ನಾವ ಹಾನಿಯೂ ಆಗಲಿಲ್ಲ. ಕೊಂಚ ಲಾಭವೂ ಆಗಿರಬೇಕೆಂದು ನನಗೆ ಈಗ ಎನಿಸು-ತ್ತದೆ. ಮಾತನಾಡಲು ಸಂಕೋಚವೆನಿಸುತ್ತಿದ್ದುದರಿಂದ ಮೊದಲು ನನಗೆ ದುಃಖವಾಗುತ್ತಿತ್ತು. ಈಗ ಸುಖವೆನಿಸು-ತ್ತದೆ. ಇದರಿಂದಾದ ದೊಡ್ಡ ಲಾಭವೆಂದರೆ ನಾನು ಶಬ್ದಗಳ ಮಿತವ್ಯಯವನ್ನು ಕಲಿತೆನು. ವಿಚಾರಗಳನ್ನು ನನ್ನ ಅಂಕಿತದಲ್ಲಿಟ್ಟುಕೊಳ್ಳುವ ಅಭ್ಯಾಸವು ಸಹಜವಾಗಿ ಆಯಿತು. ನನ್ನ ಮಾತಿನಲ್ಲಾಗಲಿ, ಬರಹದಲ್ಲಾಗಲಿ ವಿಚಾರ ಮಾಡದೆ, ತೂಗದೆ ಯಾವ ಶಬ್ದವೂ ಹೊರಡು-ವುದು ಕ್ವಚಿತ್ತಾಗಿ. ನನ್ನ ಭಾಷಣ ಅಥವಾ ಲೇಖನದ ಯಾವ ಭಾಗವನ್ನೂ ಕುರಿತು ನಾಚಿಕೆ ಪಡಬೇಕಾದ ಅಥವಾ ಪಶ್ಚಾತ್ತಾಪ ಪಡಬೇಕಾದ ಪ್ರಸಂಗ ಬಂದುದು ನನಗೆ ನೆನಪಿಲ್ಲ. ಇದರಿಂದಾಗಿ ನಾನು ಅನೇಕ ಪ್ರಸಂಗ-ಗಳಿಂದ ಪಾರಾದೆನಲ್ಲದೆ, ವೃಥಾ ಕಾಲಹರಣವೂ ತಪ್ಪಿತು.

ಸತ್ಯದ ಆರಾಧಕನು ಮೌನವನ್ನವಲಂಬಿಸುವುದು ಉಚಿತವೆಂಬ ಮಾತೂ ನನಗೆ ಅನುಭವದಿಂದ ಹೊಳೆ-ಯಿತು. ಅನೇಕ ಸಲ ಮನುಷ್ಯನು ತಿಳಿದೋ ತಿಳಿಯ-ದೆಯೋ ಸತ್ಯ ಸಂಗತಿಯನ್ನೇ ಅತಿಶಯೋಕ್ತಿ ಮಾಡಿ

ಹೇಳುತ್ತಾನೆ; ಅಥವಾ ಹೇಳಲು ಯೋಗ್ಯವಾದ ಮಾತನ್ನು ಮರೆಮಾಡುತ್ತಾನೆ. ಇಲ್ಲವೆ ಅನ್ಯರೀತಿಯಲ್ಲಿ ಹೇಳು-ತ್ತಾನೆ. ಇಂತಹ ಸಂಕಟದಿಂದ ಪಾರಾಗಲು ಮಿತಭಾಷಿ ಯಾಗುವುದು ಅವಶ್ಯವಿದೆ. ಮಿತಭಾಷಿಯಾದವನು ವಿಚಾರ ಮಾಡದೆ ಮಾತನಾಡುವುದಿಲ್ಲ. ಅವನು ತನ್ನ ಪ್ರತಿಯೊಂದು ಶಬ್ದವನ್ನೂ ತೂಗಿ ನೋಡುತ್ತಾನೆ. ಬಹಳ ಸಲ ಮನುಷ್ಯನು ಮಾತನಾಡಲು ಆತುರವುಳ್ಳವ-ನಾಗುತ್ತಾನೆ. "ನಾನೂ ಮಾತನಾಡಲು ಇಚ್ಛಿಸುತ್ತೇನೆ" ಎಂಬರ್ಥದ ಚೀಟಿಗಳು ಯಾವ ಸಭಾಧ್ಯಕ್ಷನ ಕಡೆಗೆ ಬರುವದಿಲ್ಲ? ಆದರೆ ಭಾಷಣಕಾರನಿಗೆ ಕೊಟ್ಟ ಸಮ-ಯವು ಸಾಕಾಗುವದಿಲ್ಲ; ಇನ್ನಷ್ಟು ಸಮಯವನ್ನು ಬೇಡುತ್ತಾನೆ; ಅಪ್ಪಣೆ ಪಡೆಯದೆ ಮಾತನಾಡುತ್ತಲೇ ಇರುತ್ತಾನೆ. ಇದರಿಂದ ಜನರಿಗೆ ಯಾವ ಪ್ರಯೋಜನವೂ ಆಗುವುದಿಲ್ಲ. ಬಹಳಷ್ಟು ಸಮಯವು ವ್ಯರ್ಥ ಹೋಗು-ವುದನ್ನು ನಾವು ಕಾಣುತ್ತೇವೆ. ಆದಕಾರಣ ಆರಂಭಕ್ಕೆ ನನ್ನ ಅಂಜುಬುರುಕುತನದಿಂದ ನನಗೆ ತೊಂದರೆಯಾಗು ತ್ತಿದ್ದರೂ ಈಗ ನನಗೆ ಅದರ ನೆನಪು ಆನಂದವನ್ನೀಯು-ತ್ತದೆ. ಈ ಲಜ್ಜಾಶೀಲತೆಯು ನನ್ನ ರಕ್ಷಾ ಕವಚ-ವಾಗಿತ್ತು. ಇದರಿಂದಾಗಿ ನನ್ನ ವಿಚಾರಗಳು ಪಕ್ವ ವಾಗಲು ಅವಕಾಶವು ಸಿಕ್ಕಿತು. ನನ್ನ ಸತ್ಯದ ಆರಾಧನೆ ಯಲ್ಲಿ ಇದರಿಂದ ನನಗೆ ಬಲು ಸಹಾಯವಾಯಿತು.

## ಅಸತ್ಯವೆಂಬ ವಿಷ

ನಾಲ್ವತ್ತು ವರ್ಷಗಳ ಕೆಳಗೆ ವಿಲಾಯತಿಗೆ ಹೋಗುವವರ ಸಂಖ್ಯೆಯು ಇಂದಿನದಕ್ಕಿಂತ ಕಡಮೆಯಿತ್ತು. ವಿವಾಹಿತರಾಗಿದ್ದರೂ ತಾವು ಅವಿವಾಹಿತರಾಗಿದ್ದೇವೆ-ಯೆಂದು ಹೇಳುವ ರೂಢಿಯೂ ಇಂಥ ಜನರಲ್ಲಿತ್ತು. ಹೀಗೆ ಮದುವೆಯಾದ ಸಂಗತಿಯನ್ನು ಬಚ್ಚಿಡಲಿಕ್ಕೆ ಒಂದು ಕಾರಣವೆಂದರೆ, ಯಾರ ಕುಟುಂಬದಲ್ಲಿ ಅವರು ಇರುತ್ತಿದ್ದರೋ ಅವರಲ್ಲಿಯ ತರುಣಿಯರೊಂದಿಗೆ ತಿರುಗಾ-ಡುವ ಹಾಗು ಹಾಸ್ಯವಿನೋದ ಮಾಡುವ ಸ್ವಾತಂತ್ರ್ಯವು ವಿವಾಹಿತರೆಂದು ಹೇಳಿದ್ದರೆ— ಅವರಿಗೆ ಸಿಗುತ್ತಿದ್ದಿಲ್ಲ. ಈ ಆಮೋದ–ಪ್ರಮೋದವು ಬಹುಶಃ ನಿರ್ದೋಷವಾಗಿರು-ತ್ತಿತ್ತು. ನಮ್ಮ ದೃಷ್ಟಿಯಲ್ಲಿ ತ್ಯಾಜ್ಯವಾದ ಇಂಥ ಸಾಹ-ಚರ್ಯವು ಇಂಗ್ಲಿಷರಿಗೆ ನಿರ್ದೋಷವೆನಿಸುತ್ತಿದ್ದುದರಿಂದ, ನಮ್ಮ ಯುವಕರು ಸುಳ್ಳು ಹೇಳಲು ಹಿಂಜರಿಯುತ್ತಿದ್ದಿಲ್ಲ. ಈ ಚಟಿಯಲ್ಲಿ ನಾನೂ ಮೋಸಹೋದೆನು. ಈ ಸುಳ್ಳು ಬ್ರಹ್ಮಚರ್ಯದ ಸವಿಯನ್ನು ನಾನೂ ನೋಡಿದೆನು.

ಆಗ ನನ್ನ ಅಂಜುಬುರುಕುತನವೂ ಮೌನವೂ ನನ್ನನ್ನು ಬಹಳವಾಗಿ ಕಾಪಾಡಿದುವು. ನಾನೇ ಮಾತ ನಾಡಲು ಹಿಂಜರಿಯುತ್ತಿದ್ದಾಗ, ಯಾವಳೇ ತರುಣಿಯು ನನ್ನೊಡನೆ ತಾನೇ ಮಾತನಾಡುವುದೆಂತು? ಯಾವ ತರುಣಿಯೂ ನನ್ನೊಡನೆ ಕ್ವಚಿತ್ತಾಗಿ ಆಡ್ಡಾಡಲು ಹೊರಡುತ್ತಿದ್ದಳು.

ನಾನು ನಾಚುಗುಳಿಯಾಗಿದ್ದಂತೆ ಪುಕ್ಕನೂ ಆಗಿ-ದ್ದೆನು. ವೇಂಟನೋರದಲ್ಲಿಯ ಮನೆಯ ಯಜಮಾನಿಯ ಮಗಳು ಸುತ್ತುಮುತ್ತಲಿನ ಸುಂದರವಾದ ಬೆಟ್ಟಗಳ ಮೇಲೆ ಅಡ್ಡಾಡಲು ನನ್ನನ್ನು ಕರೆದುಕೊಂಡು ಹೋಗು-ತ್ತಿದ್ದಳು. ನನ್ನ ನಡಿಗೆಯೇನೂ ಮಂದವಾಗಿರಲಿಲ್ಲ; ಆದರೆ ಅವಳ ನಡಿಗೆಯು ನನ್ನದಕ್ಕಿಂತಲೂ ತೀವ್ರವಾ-ಗಿತ್ತು. ಅವಳು ಹಕ್ಕಿಯಂತೆ ಹಾರುತ್ತ ಹೋಗುತ್ತಿದ್ದಳು; ನಾನು ಯಾವಾಗ ಮನೆ ಮುಟ್ಟುವೆನೋ ಎಂದು ಯೋಚಿ ಸುತ್ತಿದ್ದೆನು. ಅಷ್ಟರಲ್ಲಿ ನಾವು ಒಂದು ಗುಡ್ಡದ ಶಿಖರ-ವನ್ನು ಏರಿ ನಿಂತೆವು. ಇನ್ನು ತಿರುಗಿ ಇಳಿಯುವ ಬಗೆ ಹೇಗೆ? ಅಷ್ಟರಲ್ಲಿಯೇ ಎತ್ತರ ಹಿಮ್ಮಡಿಯ ಬೂಟು ಗಳಿದ್ದರೂ ಈ ೨೦-೨೫ ವರ್ಷದ ತರುಣಿಯು ಬಾಣ ಬಿಟ್ಟಂತೆ ಸರ್‍ರನೆ ಕೆಳಗಿಳಿದು ಹೋದಳು. ಈಗ ಕೆಳಗಿಳಿ-ಯುವುದು ಹೇಗೆ ಎಂಬ ವಿಚಾರದಲ್ಲಿಯೇ ನಾನು ಇನ್ನೂ ಇದ್ದೆನು. ಇಷ್ಟರಲ್ಲಿ ಅವಳು ಕೆಳಗಿಳಿದು ಕಳಕಳನೆ

ನಗುತ್ತ ನನ್ನನ್ನು ಹುರಿದುಂಬಿಸುತ್ತಿದ್ದಳು. "ಮೇಲೆ ಬಂದು ಕೈ ಹಿಡಿದು ಕೆಳಗಿಳಿಸಲೇನು?" ಎಂದು ಕೇಳಿದಳು. ನಾನು ಅಷ್ಟು ಅಳ್ಳೆದೆಯವನೆಂದು ತೋರಿಸಿಕೊಳ್ಳುವುದು ಹೇಗೆ? ಸಾವಕಾಶವಾಗಿ ಕಾಲುಗಳನ್ನು ಇಡುತ್ತ, ಕೆಲವು ಕಡೆಗಳಲ್ಲಿ ಅಂಬೆಗಾಲಿಡುತ್ತ ಅಂತೂ ಕೆಳಗೆ ಇಳಿದೆನು. ಅವಳು ವೋಜಿನಲ್ಲಿ 'ಶಾಬಾಸ್' ಎನ್ನುತ್ತಲೇ ಮೊದಲೇ ನಾಚಿಕೆಪಟ್ಟ ನಾನು ಇನ್ನಷ್ಟು ನಾಚುವಂತೆ ಮಾಡಿದಳು.

ಆದರೆ ಪ್ರತಿಯೊಂದು ಸ್ಥಳದಲ್ಲಿಯೂ ನಾನು ಈ ರೀತಿ ರಕ್ಷಿಸಲ್ಪಡುವುದು ಹೇಗೆ? ಪರಮಾತ್ಮನೇ ನನ್ನ ಅಂತರಂಗದೊಳಗಿನ ಅಸತ್ಯದ ವಿಷವನ್ನು ಹೊರದೂಡುವವನಿದ್ದನು. ಬ್ರಾಯಿಟನ್ ಭೋಜನ ಗೃಹದಲ್ಲಿ ಓರ್ವ ಮುದುಕಿಯೊಡನೆ ನನ್ನ ಪರಿಚಯವಾಯಿತು. ಅವಳು ಲಂಡನಿನಲ್ಲಿ ಪ್ರತಿ ಭಾನುವಾರವೂ ನನ್ನನ್ನು ಊಟಕ್ಕೆ ಆಮಂತ್ರಿಸುತ್ತಿದ್ದಳು. ನನ್ನ ನಾಚಿಕೆಯನ್ನು ಹೊಡೆದೋಡಿಸುತ್ತಿದ್ದಳು. ತರುಣಿಯರೊಂದಿಗೆ ಪರಿಚಯ ಮಾಡಿಕೊಟ್ಟು, ಅವರೊಡನೆ ಮಾತನಾಡಲು ಹುರಿದುಂಬಿಸುತ್ತಿದ್ದಳು. ಒಬ್ಬ ಹೆಣ್ಣುಮಗಳು ಅವರ ಮನೆಯಲ್ಲಿ ವಾಸವಾಗಿದ್ದಳು. ಅವಳೊಡನೆ ನನ್ನನ್ನು ಬಹಳ ಮಾತನಾಡಿಸಹಚ್ಚುತ್ತಿದ್ದಳು. ಒಮ್ಮೊಮ್ಮೆ ನಮ್ಮಿಬ್ಬರನ್ನೇ ಏಕಾಂತದಲ್ಲಿ ಬಿಟ್ಟು ಹೋಗುತ್ತಿದ್ದಳು.

"ಈಗೇನು ಮಾಡಲಿ? ನಾನು ವಿವಾಹಿತನಾಗಿದ್ದ ಸುದ್ದಿಯನ್ನು ಮೊದಲೇ ಈ ಮುದುಕಿಗೆ ಹೇಳಿಬಿಟ್ಟಿದ್ದರೆ ಒಳಿತಾಗುತ್ತಿತ್ತು. ನಾನು ಯಾರನ್ನಾದರೂ ಮದುವೆಯಾಗಬೇಕೆಂದು ಅವಳ ವಿಚಾರವಿರಬಹುದೇ? ಇನ್ನೂ ಕ್ಷೈಮೀರಿ ಹೋಗಿಲ್ಲ. ಸಮಯವಿದೆ; ಸತ್ಯವನ್ನು ಹೇಳಿ-ಬಿಡುವುದರಿಂದ ಹೆಚ್ಚಿನ ಸಂಕಟದಲ್ಲಿ ಬೀಳಲಿಕ್ಕಿಲ್ಲ." ಹೀಗೆ ವಿಚಾರ ಮಾಡಿ ನಾನು ಅವಳಿಗೊಂದು ಕಾಗದ ಬರೆದೆನು.

"ನಾನು ತಮ್ಮನ್ನು ಭೆಟ್ಟಿಯಾದಂದಿನಿಂದ ಮಗನಂತೆ ನನ್ನನ್ನು ಕಂಡಿದ್ದೀರಿ. ನಾನು ವಿವಾಹವಾಗಿದ್ದ ಸಂಗತಿ-ಯನ್ನು ತಮ್ಮ ಕಡೆಯಿಂದ ಬಚ್ಚಿಟ್ಟ ಬಗ್ಗೆ ನನಗೆ ವ್ಯಸನವಾಗುತ್ತದೆ. ಆದರೆ ಸತ್ಯವನ್ನು ಹೇಳುವ ಧೈರ್ಯ-ವನ್ನು ದೇವರು ನನಗೆ ಈಗ ಕೊಟ್ಟಿದ್ದಾನೆ. ಇದರಿಂದ ನನಗೆ ಆನಂದವಾಗಿದೆ. ತಾವು ದಯವಿಟ್ಟು ನನ್ನನ್ನು ಕ್ಷಮಿಸುವಿರಲ್ಲವೇ? ನನಗೆ ತಾವು ಪರಿಚಯ ಮಾಡಿ-ಕೊಟ್ಟ ತಂಗಿಯೊಡನೆ ನಾನು ಯಾವ ಅನುಚಿತ ವರ್ತನೆಯನ್ನೂ ಮಾಡಿಲ್ಲವೆಂದು ವಿಶ್ವಾಸದಿಂದ ಹೇಳ-ಬಲ್ಲೆ. ಯಾವ ಅನುಚಿತ ಮಾತನ್ನೂ ಆಡಲಿಲ್ಲವೆಂದೂ ನಾನು ಚೆನ್ನಾಗಿ ಬಲ್ಲೆನು.

ತಮ್ಮ ಪ್ರೀತಿಯ ಬಗ್ಗೆ ನಾನು ಯಾವಾಗಲೂ ಋಣಿಯಾಗಿದ್ದೇನೆ. ಇದನ್ನೆಲ್ಲ ತಿಳಿಸಿದ ಮೇಲೆ ನಾನು

ತಮ್ಮಲ್ಲಿ ಬರಲು ಇನ್ನೂ ಯೋಗ್ಯನೆಂದು ತಿಳಿದಲ್ಲಿ, ಅದು ತಮ್ಮ ವಿಶ್ವಾಸದ ಹೊಸ ಕುರುಹೆಂದು ತಿಳಿಯು-ವೆನು; ಹಾಗೂ ಅದಕ್ಕೆ ಅರ್ಹನಾಗಲು ಪ್ರಯತ್ನಿ-ಸುವೆನು."

ಈ ಪತ್ರವನ್ನು ಕಳಿಸಿಕೊಟ್ಟ ಮೇಲೆ ನನ್ನ ಮನಸ್ಸಿನ ಮೇಲಿನ ದೊಡ್ಡ ಭಾರವು ಇಳಿದಂತಾಯಿತು. ಅದಕ್ಕೆ ಈ ಕೆಳಗಿನಂತೆ ಆವಳಿಂದ ಉತ್ತರವು ಬಂದಿತು:

"ನೀವು ಮನಸ್ಸು ಬಿಚ್ಚಿ ಬರೆದ ಪತ್ರವು ತಲುಪಿತು. ಅದನ್ನು ಓದಿ, ನಮಗಿಬ್ಬರಿಗೂ ಸಂತೋಷವಾಯಿತಲ್ಲದೆ ಹೊಟ್ಟೆತುಂಬ ನಗುವೂ ಬಂದಿತು. ತಮ್ಮ ಈ ತೆರನಾದ ಅಸತ್ಯವು ಕ್ಷಮ್ಯವಾಗಿದೆ. ತಾವು ಸತ್ಯ ಸಂಗತಿಯನ್ನು ಬರೆದು ತಿಳಿಸಿದುದು ಒಳಿತಾಯಿತು. ನನ್ನ ಆಮಂತ್ರಣವು ನಿಮಗೆ ಸದಾಕಾಲವೂ ಇದೆ. ನಮ್ಮ ಗೆಳೆತನದಲ್ಲಿ ಕುಂದುಂಟಾಗಲಿಕ್ಕಿಲ್ಲವೆಂಬ ಬಗ್ಗೆ ವಿಶ್ವಾಸವಿರಲಿ."

## ಧರ್ಮದ ಪರಿಚಯ

ಇಬ್ಬರು ಥಿಯೋಸೊಫಿಸ್ಟ ಬಂಧುಗಳ ಜೊತೆಗೆ ನಾನು ಗೀತೆಯನ್ನೋದಲು ಪ್ರಾರಂಭಿಸಿದೆನು. ಎರಡ-ನೆಯ ಅಧ್ಯಾಯದೊಳಗಿನ

> ಧ್ಯಾಯತೋ ವಿಷಯಾನ್ ಪುಂಸಃ
> ಸಂಗಸ್ತೇಷೂಪಜಾಯತೇ ।
> ಸಂಗಾತ್ಸಂಜಾಯತೇ ಕಾಮಃ
> ಕಾಮಾತ್ ಕ್ರೋಧೋಭಿಜಾಯತೇ ॥
> ಕ್ರೋಧಾದ್ಭವತಿ ಸಮ್ಮೋಹಃ
> ಸಮ್ಮೋಹಾತ್ ಸ್ಮೃತಿವಿಭ್ರಮಃ ।
> ಸ್ಮೃತಿಭ್ರಂಶಾದ್ಬುದ್ಧಿನಾಶಃ
> ಬುದ್ಧಿನಾಶಾತ್ ಪ್ರಣಶ್ಯತಿ ॥*

---

* ಮನುಷ್ಯನು ವಿಷಯಗಳ ವಿಚಾರವಾಗಿ ಚಿಂತನೆ ಮಾಡು ತ್ತಿದ್ದರೆ ಅವನಿಗೆ ಮೊದಲು ವಿಷಯಗಳ ಸಂಗ ಅಥವಾ ಆಸಕ್ತಿಯು ಉತ್ಪನ್ನವಾಗುತ್ತದೆ. ಸಂಗದಿಂದ ಕಾಮವು ಹುಟ್ಟುತ್ತದೆ; ಮತ್ತು ಕಾಮದಿಂದ ಕ್ರೋಧವುಂಟಾಗುತ್ತದೆ. ಕ್ರೋಧದಿಂದ ಸಂಮೋ-ಹವೂ, ಸಂಮೋಹದಿಂದ ಸ್ಮೃತಿಭ್ರಮೆಯೂ, ಸ್ಮೃತಿಭ್ರಮೆ-ಯಿಂದ ಬುದ್ಧಿನಾಶವೂ ಉಂಟಾಗುತ್ತವೆ. ಮತ್ತು ಬುದ್ಧಿನಾಶ ವೆಂದರೆ ಮನುಷ್ಯನ ನಾಶವೇ ಸರಿ!

ಈ ಎರಡೂ ಶ್ಲೋಕಗಳಿಂದ ನನ್ನ ಮನಸ್ಸಿನ ಮೇಲೆ ಆಳವಾದ ಪರಿಣಾಮವಾಯಿತು. ಅವುಗಳ ಧ್ವನಿಯು ಕಿವಿಗಳಲ್ಲಿ ಪ್ರತಿಧ್ವನಿಸುತ್ತಿತ್ತು. ಗೀತೆಯು ಅಮೂಲ್ಯ ಗ್ರಂಥವೆಂದು ಆಗ ನನಗೆ ಮನವರಿಕೆಯಾಯಿತು. ಈ ಭಾವನೆಯು ದಿನದಿನವೂ ದೃಢವಾಗುತ್ತ ಹೋಯಿತು. ಇಂದು ನಾನು ಅದು ತತ್ವಜ್ಞಾನದ ಸರ್ವೋತ್ಕೃಷ್ಟ ಗ್ರಂಥವೆಂದು ತಿಳಿಯುತ್ತೇನೆ. ನಿರಾಶೆಯ ಗಳಿಗೆಗಳಲ್ಲಿ ಈ ಗ್ರಂಥವು ನನಗೆ ಅಮೂಲ್ಯವಾದ ಸಹಾಯವನ್ನು ಮಾಡಿದೆ. ಇದರ ಬಹುಶಃ ಎಲ್ಲ ಇಂಗ್ಲಿಷ್ ಅನುವಾದ ಗಳನ್ನೂ ನಾನು ಓದಿರುವೆನು. ಆದರೆ ಎಡ್ವಿನ್ ಅರ್ನೋಲ್ಡ್ ಅವರ ಅನುವಾದವು ಎಲ್ಲವುಗಳಲ್ಲಿ ಶ್ರೇಷ್ಠ-ವಾದುದೆಂದು ನನಗೆ ಅನಿಸುತ್ತದೆ. ಆ ಕಾಲದಲ್ಲಿ ಗೀತೆಯ ಅಧ್ಯಯನವನ್ನು ನಾನು ಮಾಡಿದೆನೆಂದು ಮಾತ್ರ ಹೇಳ-ಲಾರೆನು. ಆದರ ನಿತ್ಯಪಾಠವನ್ನು ಕೆಲ ವರುಷಗಳ ನಂತರ ಪ್ರಾರಂಭಿಸಿದೆನು.

ಈ ಥಿಯಾಸೊಫಿಸ್ಟ ಬಂಧುಗಳೇ ನನಗೆ ಆರ್ನೋ-ಲ್ಡರ 'ಬುದ್ಧಚರಿತೆ' ಯನ್ನೋದಲು ಸಲಹೆ ಕೊಟ್ಟರು. ಅವನ್ನು ನಾನು ಗೀತೆಗಿಂತಲೂ ಹೆಚ್ಚಿನ ಆಸಕ್ತಿಯಿಂದ ಓದಿದೆನು.

ಈ ಸಹೋದರರು ನನ್ನನ್ನು ಮ್ಯಾಡಮ್ ಬ್ಲೆವಟ್‌ಸ್ಕಿ ಮತ್ತು ಮಿಸೆಸ್ ಅನಿಬೇಸಂಟ ಅವರ ಭೆಟ್ಟಿಯನ್ನು

ಮಾಡಿಸಿದರು. ನಾನೂ ಥಿಯಾಸೋಫಿ ಸಂಸ್ಥೆಯನ್ನು ಸೇರಬೇಕೆಂದು ಹೇಳಿದರು. ಆಗ ನಾನು: "ನನಗೆ ಧರ್ಮದ ಯಾವ ಜ್ಞಾನವೂ ಇಲ್ಲ. ಆದುದರಿಂದ ಯಾವ ಸಂಪ್ರದಾಯವನ್ನೂ ಸೇರಲು ನಾನು ಬಯಸುವುದಿಲ್ಲ." ಎಂದು ಹೇಳಿದೆನು. ಮೆಡಮ್ ಬ್ಲಿವಟ್‌ಸ್ಕಿ ಅವರ 'ಕೀ ಟು ಫಿಲಾಸಫಿ' ಈ ಪುಸ್ತಕವನ್ನು ನಾನು ಓದಿದೆನು. ಇದರಿಂದಾಗಿ ನನಗೆ ಹಿಂದೂ ಧರ್ಮದ ಪುಸ್ತಕಗಳನ್ನು ಓದುವ ಬಯಕೆಯಾಯಿತು. ಹಿಂದೂ ಧರ್ಮವು ಅಂಧ ಶ್ರದ್ಧೆಯಿಂದ ತುಂಬಿರುವುದೆಂದು ಪಾದ್ರಿ ಜನರು ಹೇಳುತ್ತಿದ್ದ ತಪ್ಪು ಅಭಿಪ್ರಾಯವು ನನ್ನ ಮನಸ್ಸಿನಿಂದ ಹೊರಟು ಹೋಯಿತು.

ಓರ್ವ ಒಳ್ಳೆಯ ಕ್ರಿಶ್ಚಿಯನ್ ಮಿತ್ರನು ನಾನು ಬಾಯಬಲ್ ಓದಬೇಕೆಂದು ಉತ್ತೇಜಿಸಿದನು. ನಾನು ಅದನ್ನೂ ಓದಲು ಪ್ರಾರಂಭಿಸಿದೆನು. ಆದರೆ 'ಹಳೆಯ ಒಡಂಬಡಿಕೆಯನ್ನು' ಓದುವುದಾಗಲಿಲ್ಲ. 'ಜೇನಿಸಿಸ್' (ಸೃಷ್ಟಿ-ಉತ್ಪತ್ತಿ) ದ ಮುಂದಿನ ಪ್ರಕರಣಗಳನ್ನು ಓದುತ್ತಿದ್ದ ಹಾಗೆ ನನಗೆ ನಿದ್ದೆ ಬರತೊಡಗಿತು. 'ನಂಬರ್ಸ' ಎಂಬ ಹೆಸರಿನ ಪ್ರಕರಣವನ್ನು ಓದಿ ಅರುಚಿಯುಂಟಾಯಿತು.

ಆದರೆ 'ಹೊಸ ಒಡಂಬಡಿಕೆ'ಯನ್ನು ಓದಿದಕೂಡಲೆ ನನ್ನ ಮೇಲೆ ಬಹಳ ಪರಿಣಾಮವಾಯಿತು. ಏಸುವಿನ

'ಗಿರಿ ಪ್ರವಚನ'ದ ಪರಿಣಾಮವು ಬಹಳ ಒಳ್ಳೆಯ-ದಾಯಿತು. ಅದು ನೇರವಾಗಿ ನನ್ನ ಹೃದಯವನ್ನು ಮುಟ್ಟಿತು. "ದುಷ್ಕೃತಿಯನ್ನು ಹಿಂಸೆಯಿಂದ ಪ್ರತಿಭಟಿಸ-ಬೇಡ. ನಿನ್ನ ಅಂಗಿಯನ್ನು ಬೇಡಿದವನಿಗೆ ನಿಲುವಂಗಿ-ಯನ್ನೇ ಕೊಟ್ಟು ಬಿಡು. ನಿನ್ನ ಬಲ ಗಲ್ಲದಮೇಲೆ ಹೊಡೆದವನಿಗೆ ಎಡ ಗಲ್ಲವನ್ನೂ ಮುಂದೆ ಮಾಡು." ಎಂಬುದನ್ನು ಓದಿ ನನಗೆ ಹಿಡಿಸಲಾರದಷ್ಟು ಆನಂದವಾಯಿತು. ಈ ಅಮೋಘವಾದ ವಾಕ್ಯವನ್ನು ಓದಿ ನನಗೆ "ಒಂದು ಚೊಗಸೆ ನೀರಿಗೆ ಸಮೀಚೀನ ಊಟವನ್ನು ಕೊಡು" ಎಂಬ ಶಾಮುಲಭಟ್ಟರ ಗೀತವೇ ನೆನಪಾಯಿತು. ನನ್ನ ಎಳೆಯ ಮನಸ್ಸು ಗೀತೆ, ಬುದ್ಧಚರಿತೆ ಮತ್ತು ಗಿರಿ-ಪ್ರವಚನಗಳಲ್ಲಿಯ ಉಪದೇಶವನ್ನು ಹೊಂದುಗೂಡಿಸಲು ಯತ್ನಿಸಿತು. ತ್ಯಾಗವೇ ಧರ್ಮದ ಅತ್ಯುಚ್ಚ ರೂಪವೆಂದು ನನಗೆ ಮನದಟ್ಟಾಯಿತು.

ಒಬ್ಬ ಮಿತ್ರರು ಕಾರ್ಲಾಯಿಲನ "ವಿಭೂತಿಗಳು ಮತ್ತು ವಿಭೂತಿ ಪೂಜೆ" ಎನ್ನುವ ಪುಸ್ತಕವನ್ನು ಓದುವ ಸಲಹೆಯನ್ನಿತ್ತರು. ಅದರಲ್ಲಿಯ ಪೈಗಂಬರರ ವಿಷಯದಲ್ಲಿದ್ದ ಭಾಗವನ್ನು ಓದಿ, ಅವರ ಮಹಿಮೆ, ಶೌರ್ಯ ಮತ್ತು ತಪಶ್ಚರ್ಯೆಗಳ ಪರಿಚಯವು ನನಗಾಯಿತು.

ನಾಸ್ತಿಕತೆಯ ವಿಷಯದಲ್ಲಿಯೂ ಏನೂ ತಿಳಿದು-ಕೊಳ್ಳದೆ ಇರುವುದು ಹೇಗೆ? ಬ್ರೆಡ್‌ಲೊನನ್ನು ನಾಸ್ತಿಕ-

ನೆಂದು ಕರೆಯುತ್ತಿದ್ದರು. ಆದುದರಿಂದ ಅವನ ವಿಷಯ ದಲ್ಲಿಯೂ ಒಂದು ಪುಸ್ತಕವನ್ನು ಓದಿಡೆನು. ಇದರಿಂದ ನನ್ನ ಮನಸ್ಸಿನ ಮೇಲೆ ಯಾವ ಪರಿಣಾಮವೂ ಆಗಲಿಲ್ಲ. ಯಾಕಂದರೆ ನಾಸ್ತಿಕತೆಯೆಂಬ ಮರುಭೂಮಿಯನ್ನು ನಾನು ಇಷ್ಟರಲ್ಲಿಯೇ ದಾಟಿದ್ದೆನು.

## ನಿರ್ಬಲಕೇ ಬಲ ರಾಮ—

ನಿರ್ಬಲರಿಗೆ ರಾಮನೇ ಆಶ್ರಯ. ಬೌದ್ಧ ಧರ್ಮದ ಜ್ಞಾನವು ಮನುಷ್ಯನನ್ನು ಕಾಪಾಡಲು ಸಾಕೆನಿಸುವುದಿಲ್ಲ. ನಾಸ್ತಿಕನು ತಾನು ಬದುಕಿದರೆ ಏನೋ ಪಾರಾದೆನೆಂದು ಹೇಳುತ್ತಾನೆ. ಆಸ್ತಿಕನು ಈಶ್ವರನೇ ತನ್ನನ್ನು ಕಾಪಾಡಿದನೆಂದು ಹೇಳುವನು. ಪರಿಣಾಮದ ಮೇಲಿಂದ ಸಂಯಮದಿಂದಾಗಿ ಈಶ್ವರನು ಹೃದಯದಲ್ಲಿ ಪ್ರಕಟವಾಗುತ್ತಾನೆಂದು ಅವನು ಊಹಿಸುತ್ತಾನೆ. ಆದರೆ ರಕ್ಷಿಸಲ್ಪಡುವ ಕಾಲಕ್ಕೆ ಸಂಯಮವೇ ಬದುಕಿಸುತ್ತದೆಯೋ ಬೇರೆ ಯಾವುದಾದರೂ ಶಕ್ತಿ ಇದೆಯೋ ಎಂಬುದು ಅವನಿಗೆ ಗೊತ್ತಿರುವುದಿಲ್ಲ. ಸಂಯಮ ಶಕ್ತಿಯ ಬಗ್ಗೆ ಹೆಮ್ಮೆಪಡುವವನು ಭ್ರಷ್ಟನಾಗುತ್ತಾನೆ.— ಈ ಅನುಭವವು ಯಾರಿಗಿಲ್ಲ? ಇಂಥ ಸಮಯದಲ್ಲಿ ಧರ್ಮಜ್ಞಾನವು ವ್ಯರ್ಥವೆಂದು ಗೊತ್ತಾಗುತ್ತದೆ.

ವೈಚಾರಿಕ ಧರ್ಮಜ್ಞಾನವು ನಿರರ್ಥಕವಾದುದೆಂಬುದರ ಅನುಭವವು ನನಗೆ ವಿಲಾಯತಿಯಲ್ಲಾಯಿತು. ಅದು ಹೀಗೆ:-

೧೮೯೦ ರ ಸುಮಾರಿಗೆ ಶಾಕಾಹಾರಿಗಳದೊಂದು ಸಮ್ಮೇಳನವು ಪೋರ್ಟ್ಸ್‌ಮಥ್‌ದಲ್ಲಿ ನಡೆಯಿತು. ಇದಕ್ಕೆ ನನಗೂ ಇನ್ನೊಬ್ಬ ಭಾರತೀಯ ಮಿತ್ರನಿಗೂ ಆಮಂತ್ರಣವಿತ್ತು. ನಾವು ಅಲ್ಲಿಗೆ ಹೋದೆವು. ನಮ್ಮನ್ನು ಓರ್ವ ಮಹಿಳೆಯ ಮನೆಯಲ್ಲಿ ಇಳಿಸಿದ್ದರು.

ಅಲ್ಲಿ ರಾತ್ರಿಯ ಊಟವಾದಮೇಲೆ ನಾವು ಇಸ್ಪೀಟು ಆಡಲು ಕುಳಿತುಕೊಂಡೆವು. ವಿಲಾಯತಿಯಲ್ಲಿ ಕುಲೀನರ ಮನೆತನಗಳಲ್ಲಿಯೂ ಗೃಹಿಣಿಯರು ಅತಿಥಿಗಳೊಂದಿಗೆ ಈ ರೀತಿಯಲ್ಲಿ ಇಸ್ಪೀಟು ಆಡುವುದುಂಟು. ಆ ಸಮಯದಲ್ಲಿ ಎಲ್ಲರೂ ವಿನೋದವನ್ನೂ ಮಾಡುವುದುಂಟು. ಆದರೆ ನಮ್ಮ ಆಟದಲ್ಲಿ ಹೊಲಸು ವಿನೋದಕ್ಕೆ ಪ್ರಾರಂಭವಾಯಿತು. ಇಂಥ ವಿನೋದದಲ್ಲಿ ನನ್ನ ಮಿತ್ರನು ಪಾರಂಗತನಿದ್ದನೆಂಬ ಕಲ್ಪನೆ ನನಗಿರಲಿಲ್ಲ. ನನಗೂ ಈ ವಿನೋದದಲ್ಲಿ ಅಭಿರುಚಿಯುಂಟಾಯಿತು. ನಾನೂ ಅದರಲ್ಲಿ ಭಾಗವಹಿಸತೊಡಗಿದೆನು. ವಿನೋದವಾಣಿಯು ಅಶ್ಲೀಲ ಚೇಷ್ಟೆಯಲ್ಲಿ ರೂಪಾಂತರ ಹೊಂದುವ ಸಮಯವೂ ಬಂದಿತು. ನನ್ನ ಮಿತ್ರನೂ ಮತ್ತು ನಮ್ಮ ಯಜಮಾನತಿಯೂ ಇಂಥ ಹೇಸಿ ನಗೆಚಾಟಿಕೆಯನ್ನು ಪ್ರಾರಂಭಿಸಿದರು. ನಾನೂ ನನ್ನ ಇಸ್ಪೇಟು ಎಲೆಗಳನ್ನು ಮರೆತುಬಿಟ್ಟು ಮೇರೆಯನ್ನು ಮೀರುವುದರಲ್ಲಿದ್ದೆ. ಆದರೆ, ಅಷ್ಟರಲ್ಲಿಯೇ, ನನ್ನ ಸನ್ಮಿತ್ರನ ಹೃದಯದಲ್ಲಿಯ

ಈಶ್ವರನು ಜಾಗೃತನಾಗಿ ಅವನು "ಏನು ಕಲಿ ಪ್ರವೇಶಿಸಿದೆ ಹುಡುಗಾ ನಿನ್ನಲ್ಲಿ? ಹೂಂ ತೀವ್ರ ಎಲೆ ಜೆಲ್ಲು" ಎಂದನು.

ನನಗೆ ನಾಚಿಕೆಯೆನಿಸಿತು. ನನಗೆ ಎಚ್ಚರಿಕೆ ದೊರಕಿದಂತಾಗಿ ನಾನು ಈ ಗೆಳೆಯನ ಉಪಕಾರವನ್ನು ಸ್ಮರಿಸಿದೆನು. ನನ್ನ ತಾಯಿಯ ಎದುರು ಮಾಡಿದ ಪ್ರತಿಜ್ಞೆಯ ಸ್ಮರಣೆಯುಂಟಾಗಿ ನಾನು ಆ ಕೋಣೆಯಿಂದ ಪಲಾಯನ ಹೇಳಿದೆನು. ನಡುಗುತ್ತಲೇ ನಾನು ನನ್ನ ಕೋಣೆಯನ್ನು ಮುಟ್ಟಿದೆನು. ನನ್ನ ಹೃದಯವು ಹೊಡೆದುಕೊಳ್ಳುತ್ತಲಿತ್ತು. ಬೇಟೆಗಾರನ ಕೈಯಿಂದ ತಪ್ಪಿಸಿಕೊಂಡ ಪ್ರಾಣಿಯಂತೆ ನನ್ನ ಸ್ಥಿತಿಯಾಗಿತ್ತು.

ಪರಸ್ತ್ರೀಯನ್ನು ನೋಡಿ ವಿಕಾರವಶನಾಗುವ ಪ್ರಸಂಗವು ನನ್ನ ಜೀವನದಲ್ಲಿ ಇದೇ ಮೊದಲನೆಯ-ದಾಗಿತ್ತು. ರಾತ್ರಿಯೆಲ್ಲ ನನಗೆ ನಿದ್ದೆ ಹತ್ತಲಿಲ್ಲ. ಅನೇಕ ವಿಚಾರಗಳು ನನ್ನನ್ನು ಆವರಿಸಿದವು. ಮನೆಯನ್ನು ಬಿಡಲೇ? ಓಡಿ ಹೋಗಲೇ? ನಾನು ಎಲ್ಲಿದ್ದೇನೆ? ನಾನು ಜಾಗ್ರತೆವಹಿಸದಿದ್ದರೆ ನನ್ನ ಗತಿಯೇನಾಗುವುದು? ನಾನು ಎಚ್ಚರಿಕೆಯಿಂದ ನಡೆಯಲು ನಿರ್ಧರಿಸಿದೆನು. ಮನೆಯನ್ನಷ್ಟೇ ಅಲ್ಲ, ಪೋರ್ಟ್ಸ್‌ಮಥವನ್ನು ಕೂಡಲೇ ಬಿಟ್ಟು ಹೋಗಬೇಕೆಂದು ವಿಚಾರ ಮಾಡಿದೆನು. ಮರು-ದಿನವೇ ಪೋರ್ಟ್ಸ್‌ಮಥವನ್ನು ಬಿಟ್ಟು ಹೊರಟೆನು.

ಈಶ್ವರನೇ ನನ್ನನ್ನು ಕಾಪಾಡಿದನೆಂದು ನಾನು

ಲೌಕಿಕ ರೀತಿಯಲ್ಲಿ ತಿಳಿದುಕೊಂಡೆನು. ಆದರೆ ಜೀವನದ ವಿವಿಧ ಕ್ಷೇತ್ರಗಳಲ್ಲಿ ಇಂಥ ಅನುಭವಗಳು ಬರುತ್ತವೆ. ಆಧ್ಯಾತ್ಮಿಕ ಸನ್ನಿವೇಶಗಳಲ್ಲಿ, ವಕೀಲಿಯಲ್ಲಿ, ಸಂಸ್ಥೆಗಳನ್ನು ನಡೆಸುವಲ್ಲಿ, ರಾಜಕೀಯ ವ್ಯವಹಾರಗಳಲ್ಲಿ ಈಶ್ವರನೇ ನನ್ನನ್ನು ಕಾಪಾಡಿದ್ದಾನೆಂದು ನಾನು ಹೇಳಬಲ್ಲೆನು. ಇಲ್ಲಿಯ ವರೆಗೆ ನನಗೆ ಧರ್ಮದ ಇಲ್ಲವೆ ಪರಮಾತ್ಮನ ತಿರುಳಾಗಲೀ ಅಥವಾ ಅವನು ಸಾಕ್ಷೀಪುರುಷನಾಗಿ ನಮ್ಮಲ್ಲಿ ಹೇಗೆ ಕೆಲಸ ಮಾಡುತ್ತಾನೆಂಬುದರ ಅರಿವಾಗಲೀ ಇರಲಿಲ್ಲ. ಈ ಪ್ರಸಂಗದಲ್ಲಿ ಹೇಗೋ ದೇವರೇ ನನ್ನನ್ನು ಸಂರಕ್ಷಿಸಿದನೆಂಬ ಅಸ್ಪಷ್ಟ ಭಾವನೆಯು ನನ್ನಲ್ಲುಂಟಾಯಿತು. ಇಂಥ ಎಲ್ಲ ಕಠಿಣ ಸಂದರ್ಭಗಳಲ್ಲಿಯೂ ಪರಮಾತ್ಮನು ನನ್ನನ್ನು ಸಂರಕ್ಷಿಸಿದ್ದಾನೆ. ಎಲ್ಲ ಆಶೆಗಳೂ ಕೊನೆಗಂಡಾಗ, "ಸಹಾಯಕರು ಕೈಬಿಟ್ಟು, ಸಮಾಧಾನವು ಇಲ್ಲದಿದ್ದಾಗ," ಎಲ್ಲಿಂದಲೋ ಏನೋ ಯಾವಾಗಲೂ ಸಹಾಯವು ಬರುತ್ತಿದೆ. ಪ್ರಣಿಪಾತ, ಪೂಜೆ, ಪ್ರಾರ್ಥನೆಗಳು ಮೂಢ ನಂಬಿಕೆಗಳಲ್ಲ; ತಿನ್ನುವುದು, ಕುಡಿಯುವುದು, ಕೂಡುವುದು ಮತ್ತು ನಡೆದಾಡುವ ಕ್ರಿಯೆಗಳಕಿಂತ ಅವು ಹೆಚ್ಚು ಸತ್ಯಪೂರ್ಣವಾದ ಕ್ರಿಯೆಗಳಾಗಿವೆ. ಅವೇ ನಿಜವಾದ ಸತ್ಯಾಂಶಗಳಾಗಿದ್ದು, ಉಳಿದುವೆಲ್ಲ ಅ-ಸತ್ಯಗಳೆಂದು ಹೇಳಿದರೆ ಅತಿಶಯೋಕ್ತಿಯೇನಲ್ಲ.

ಇಂಥ ಪ್ರಾರ್ಥನೆಯು ಬರಿಯ ವಾಣಿಯ ವೈಭವ-ವಲ್ಲ. ಅದರ ಮೂಲವು ಕಂಠದಲ್ಲಿಲ್ಲ. ಹೃದಯದಲ್ಲಿದೆ. ಆದುದರಿಂದ ನಾವು ಹೃದಯವನ್ನು ನಿರ್ಮಲವಾಗಿಸಿದರೆ, ಹೃದಯದ ತಂತಿಗಳೊಂದಿಗೆ ಸ್ವರಗೂಡಿಸಿದರೆ, ಹೊರ-ಡುವ ಧ್ವನಿಯು ಗಗನಗಾಮಿಯಾಗಿ ಪರಿಣಮಿಸುತ್ತದೆ. ಇದಕ್ಕಾಗಿ ನಾಲಗೆಯ ಆವಶ್ಯಕತೆಯಿಲ್ಲ. ಅದು ಸ್ವಾಭಾವಿಕವಾಗಿಯೇ ಅದ್ಭುತವಾದ ಸಂಗತಿಯಾಗಿದೆ. ವಿಕಾರರೂಪವಾದ ಕೊಳೆಯನ್ನು ತೊಳೆದುಹಾಕುವಲ್ಲಿ ಹಾರ್ದಿಕ ಉಪಾಸನೆಯು ರಾಮಬಾಣವಾದ ಉಪಾಯವೆಂಬುದರಲ್ಲಿ ನನಗೆ ಸಂದೇಹವಿಲ್ಲ. ಆದರೆ ಇಂತಹ ಪ್ರಸಾದವನ್ನು ಪಡೆಯಬೇಕಾದರೆ ನಮ್ಮಲ್ಲಿ ಸಂಪೂರ್ಣ ನಮ್ರತೆಯು ಇರಬೇಕಾದುದು ಅತ್ಯವಶ್ಯ.

# ಅಭ್ಯಸನಗಳು

**ಪ್ರಕರಣ—೧**

(೧) ಓತಾ ಗಾಂಧಿಯವರು ಎಡಗೈಯಿಂದ ಏಕೆ ಮುಜುರೆ ಮಾಡಿದರು ?

(೨) ಕಬಾ ಗಾಂಧಿಯವರನ್ನು ಏಕೆ ಬಂಧಿಸಿದರು ?

(೩) ಹತ್ತು ಸಾಲುಗಳಲ್ಲಿ ಗಾಂಧೀಜಿಯವರ ತಾಯಿಯ ಸ್ವಭಾವವನ್ನು ಚಿತ್ರಿಸಿರಿ.

**ಪ್ರಕರಣ—೨**

(೧) ಗಾಂಧೀಜಿಯವರ ಗುರುಗಳ ಅಭಿಪ್ರಾಯದಲ್ಲಿ ಗಾಂಧೀಜಿಯವರ 'ಮೂರ್ಖತನ'ವಾವುದು?

(೨) ಗಾಂಧೀಜಿಯವರ ಮನಸ್ಸಿನಮೇಲೆ ಪರಿಣಾಮವನ್ನು ಮಾಡಿದ ನಾಟಕವಾವುದು ? ೧೦ ಸಾಲುಗಳಲ್ಲಿ ಅದರ ಸಾರಾಂಶವನ್ನು ಕೊಡಿರಿ.

**ಪ್ರಕರಣ—೩**

(೧) ಗಾಂಧೀಜಿಯವರು ಹಾಯ್‌ಸ್ಕೂಲಿನಲ್ಲಿದ್ದಾಗ ವ್ಯಾಯಾಮವನ್ನು ಮಾಡಲಿಕ್ಕೆ ಏಕೆ ಹೋಗುತ್ತಿರಲಿಲ್ಲ ?

(೨) ಗಿಮಿ ಸಾಹೇಬರು ಗಾಂಧೀಜಿಯವರಿಗೆ ಏಕೆ ದಂಡವನ್ನು ಮಾಡಿದರು ?

**ಪ್ರಕರಣ—೪**

(೧) ಗಾಂಧೀಜಿಯವರು ಆತ್ಮಹತ್ಯವನ್ನು ಮಾಡಿಕೊಳ್ಳಬೇಕೆಂದು ಏಕೆ ಅಪೇಕ್ಷಿಸಿದರು ?

(೨) ಬೀಡಿ-ಸಿಗರೇಟು ಸೇದುವುದು ಏಕೆ ಕೆಟ್ಟ ಚಟ ?

(೩) ಗಾಂಧೀಜಿಯವರು ಅಣ್ಣನ ಬಂಗಾರದ ಕಡಗವನ್ನು ಏಕೆ ಕದ್ದರು ? ಅದರ ಪರಿಣಾಮವೇನಾಯಿತು ?

**ಪ್ರಕರಣ—೧೦**

(೧) ಗಾಂಧೀಜಿಯವರಿಗೆ ರಾಮನಾಮ ಮಹಿಮೆಯನ್ನು ಹೇಳಿಕೊಟ್ಟವರಾರು ?

(೨) ರಾಮರಕ್ಷಾ ಸ್ತೋತ್ರವೆಂದರೆ ಯಾವುದು ? ಅದರಲ್ಲಿಯ ನಾಲ್ಕು ಸಾಲುಗಳನ್ನು ಹೇಳಿರಿ.

(೩) "ವಿಷವನುಣಿಸಿದಗೆ ಷಡ್ರಸವನುಣಿಸಲುಬೇಕು" ಅಂದರೇನು ?

**ಪ್ರಕರಣ—೧೧**

(೧) ಇಂಗ್ಲಂಡಿನಲ್ಲಿದ್ದಾಗ "ಸಭ್ಯಗೃಹಸ್ಥ"ನಾಗಿ ಕಾಣಲು ಗಾಂಧೀಜಿ ಯಾವ ಯಾವ ಪ್ರಯತ್ನವನ್ನು ಮಾಡಿದರು ?

**ಪ್ರಕರಣ—೧೨**

(೧) ಇಂಗ್ಲಂಡದಲ್ಲಿದ್ದಾಗ ಗಾಂಧಿಜಿ ಆಹಾರ ವಿಷಯಕವಾಗಿ ಯಾವ ಯಾವ ಪ್ರಯತ್ನವನ್ನು ಮಾಡಿದರು ?

**ಪ್ರಕರಣ—೧೩**

ರಕ್ಷಾಕವಚವೆಂದರೇನು ? ಲಜ್ಜೆ ಗಾಂಧೀಜಿಯವರ ರಕ್ಷಾಕವಚ ಹೇಗಾಯಿತು ? ವಿವರಿಸಿರಿ.

**ಪ್ರಕರಣ—೧೪**

(೧) ಐದ್ಯೆದು ಸಾಲುಗಳಲ್ಲಿ ಕೆಳಗಿನ ವಿಷಯಗಳ ಬಗ್ಗೆ ನಿಮಗೆ ಗೊತ್ತಿದ್ದನ್ನು ಬರೆಯಿರಿ :

ಭಗವಾನ್ ಬುದ್ಧದೇವ; ಭಗವದ್ಗೀತೆ; ಬಾಯಬಲ್; ಶ್ರೀರಾಮ.

(೨) "ನಿರ್ಬಲರಿಗೆ ರಾಮನೇ ಬಲ" ಈ ವಿಷಯವಾಗಿ ಒಂದು ಚಿಕ್ಕ ನಿಬಂಧವನ್ನು ಬರೆಯಿರಿ.

(೩) ಐದು ಜನ ರಾಷ್ಟ್ರೀಯ ಮಹಾಪುರುಷರ ಹೆಸರುಗಳನ್ನು ಹೇಳಿರಿ.